# ಕರ್ನಾಟಕದ ಲಜ್ಜಾಗೌರಿ ಶಿಲ್ಪಗಳು

## ಒಂದು ದೃಶ್ಯಾತ್ಮಕ ಅಧ್ಯಯನ

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಸಂಶೋಧನ ಪ್ರಬಂಧ



ಸಂಶೋಧಕ
ಮಹಾಂತೇಶ. ಪಲದಿನ್ನಿ

ಮಾರ್ಗದರ್ಶಕರು
ಡಾ. ವ್ಹಿ. ಎಮ್. ಬಾಗಾಯತ
ಹಿ. ಶ್ರೇ. ಉಪನ್ಯಾಸಕರು
ಎಸ್.ಆರ್.ಪಿ.ಯು ಕಾಲೇಜು
ಹೊರ್ತಿ, ಬಿಜಾಪೂರ

ಸಹ ಮಾರ್ಗದರ್ಶಕರು
ಡಾ. ಎಸ್. ಸಿ. ಪಾಟೀಲ
ಡೀನ್, ಲಲಿತಕಲಾ ನಿಕಾಯ
ಮುಖ್ಯಸ್ಥರು, ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ






ದೃಶ್ಯಕಲಾ ವಿಭಾಗ
ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೦೮

# ಕರ್ನಾಟಕದ ಲಜ್ಜಾಗೌರಿ ಶಿಲ್ಪಗಳು

## ಒಂದು ದೃಶ್ಯಾತ್ಮಕ ಅಧ್ಯಯನ

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರ ಪಡಿಸಿದ ಕಿರು ಸಂಶೋಧನ ಪ್ರಬಂಧ



ಸಂಶೋಧಕ
ಮಹಾಂತೇಶ. ಪಲದಿನ್ನಿ

ಮಾರ್ಗದರ್ಶಕರು
ಡಾ.ವ್ಹಿ.ಎಂ.ಬಾಗಾಯತ
ಹಿ.ಶ್ರೇ.ಉಪನ್ಯಾಸಕರು
ಎಸ್.ಆರ್.ಪಿ.ಯು. ಕಾಲೇಜು
ಹೊರ್ತಿ, ಬಿಜಾಪೂರ





ದೃಶ್ಯಕಲಾ ವಿಭಾಗ
ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೨೦೦೮

# ಪ್ರಮಾಣ ಪತ್ರ

**"ಕರ್ನಾಟಕದ ಲಜ್ಜಾಗೌರಿ ಶಿಲ್ಪಗಳು"** ಒಂದು ದೃಶ್ಯಾತ್ಮಕ ಅಧ್ಯಯನ ಎಂಬ ಶೀರ್ಷಿಕೆಯ ಕಿರು ಸಂಶೋಧನ ಪ್ರಬಂಧವನ್ನು ಡಾ. ವ್ಹಿ.ಎಮ್.ಬಾಗಾಯತ ಇವರಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದ ದೃಶ್ಯಕಲಾ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಈ ಪ್ರಬಂಧವನ್ನು ಸಲ್ಲಿಸುತ್ತಿದ್ದೇನೆ.

ಪ್ರಸ್ತುತ ಪ್ರಬಂಧ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ದಿನಾಂಕ** : 31-10-08
**ಸ್ಥಳ** : ಕ.ವಿ.ವಿ.ಹಂಪಿ
ವಿದ್ಯಾರಣ್ಯ

m.m. Paladinni
**(ಮಹಾಂತೇಶ. ಪಲದಿನ್ನಿ)**
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

# ದೃಢೀಕರಣ ಪತ್ರ

ಮಹಾಂತೇಶ. ಪಲದಿನ್ನಿ ಇವರು ಬರೆದು ಸಾದರ ಪಡಿಸಿದ **"ಕರ್ನಾಟಕದ ಲಜ್ಜಾಗೌರಿ ಶಿಲ್ಪಗಳು"** ಒಂದು ದೃಶ್ಯಾತ್ಮಕ ಅಧ್ಯಯನ ಎಂಬ ಶೀರ್ಷಿಕೆಯ ಕಿರು ಸಂಶೋಧನ ಪ್ರಬಂಧವು ಮೂಲ ಸಂಶೋಧನ ಕೃತಿಯಾಗಿದ್ದು, ಅವರು ನನ್ನ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದ ದೃಶ್ಯಕಲಾ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸಿದ್ದಾರೆ.

ಪ್ರಸ್ತುತ ಪ್ರಬಂಧ ಇಡಿಯಾಗಿ, ಇಲ್ಲವೆ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ದಿನಾಂಕ** : 31-10-08
**ಸ್ಥಳ** : ಕ.ವಿ.ವಿ.ಹಂಪಿ
ವಿದ್ಯಾರಣ್ಯ

**(ಡಾ. ವ್ಹಿ.ಎಮ್.ಬಾಗಾಯತ)**
ಹಿ. ಶ್ರೇ. ಉಪನ್ಯಾಸಕರು
ಎಸ್.ಆರ್.ಪಿ.ಯು. ಕಾಲೇಜ
ಹೊರ್ತಿ, ಬಿಜಾಪೂರ.

# ಮುಖ್ಯಸ್ಥರ ದೃಢೀಕರಣ ಪತ್ರ

**"ಕರ್ನಾಟಕದ ಲಜ್ಜಾಗೌರಿ ಶಿಲ್ಪಗಳು"** ಒಂದು ದೃಶ್ಯಾತ್ಮಕ ಅಧ್ಯಯನ ಎಂಬ ಶೀರ್ಷಿಕೆಯ ಕಿರು ಸಂಶೋಧನ ಪ್ರಬಂಧವನ್ನು ಡಾ. ವ್ಹಿ.ಎಮ್.ಬಾಗಾಯತ ಇವರಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದ ದೃಶ್ಯಕಲಾ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಈ ಪ್ರಬಂಧವನ್ನು ಮಹಾಂತೇಶ. ಪಲದಿನ್ನಿಯವರು ಸಲ್ಲಿಸುತ್ತಿದ್ದಾರೆ. ದೃಶ್ಯಕಲಾವಿಭಾಗದಲ್ಲಿ ಎಂ.ಫಿಲ್ ಅಧ್ಯಯನ ಮಾಡಿರುವ ಇವರು ಈಗ ಕಿರು ಪ್ರಬಂಧವನ್ನು ವಿಭಾಗದ ಮೂಲಕ ಅಧ್ಯಯನಾಂಗಕ್ಕೆ ಸಲ್ಲಿಸುತ್ತಿದ್ದಾರೆ.

**ದಿನಾಂಕ** : 31-10-08
**ಸ್ಥಳ** : ಕ.ವಿ.ವಿ.ಹಂಪಿ
ವಿದ್ಯಾರಣ್ಯ

**ಮುಖ್ಯಸ್ಥರು**
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

# "ಕರ್ನಾಟಕದ ಲಜ್ಜಾಗೌರಿ ಶಿಲ್ಪಗಳು"

## ಒಂದು ದೃಶ್ಯಾತ್ಮಕ ಅಧ್ಯಯನ

---

**ಪರಿವಿಡಿ**

ಅಧ್ಯಾಯ : ಒಂದು

## ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ

ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೂ ಶಿಲ್ಪಗಳ ರಚನಾಕಾರ್ಯ ನಡೆಯುತ್ತ ಬಂದಿದೆ. ನಮಗೆ ದೊರೆತಿರುವ ಹಲವಾರು ಶೈಲಿಯ ಶಿಲ್ಪಗಳಲ್ಲಿ ಮತ್ತು ಚಿತ್ರಗಳಲ್ಲಿ ಒಂದು ವಿಶಿಷ್ಟವಾದ ರಚನೆ ಎಂದರೆ ಲಜ್ಜಾಗೌರಿ ಶಿಲ್ಪಗಳು. ಈ ಶಿಲ್ಪಗಳ ರಚನೆಯ ಹಿಂದಿನ ಉದ್ದೇಶವಾಗಲೀ, ವಿಧಾನವಾಗಲೀ, ಹಿನ್ನೆಲೆಯಾಗಲಿ, ನಮಗೆ ಇನ್ನೂ ಸ್ಪಷ್ಟವಾಗಿ ತಿಳಿದಿಲ್ಲ. ಇವು ಇಂದಿಗೂ ಬಹುಪಾಲು ರಹಸ್ಯವಾಗಿಯೇ ಉಳಿದಿವೆ. ಈ ಶಿಲ್ಪಗಳು ದೊರೆತಿರುವ ಸ್ಥಳಗಳು ಹೆಚ್ಚಾಗಿ ಉತ್ತರ ಕರ್ನಾಟಕದ ಪ್ರದೇಶಗಳಾದ ಬಾದಾಮಿ, ಐಹೊಳೆ, ಸಿದ್ದನಕೊಳ್ಳ, ಹುಲಿಗೆಮ್ಮನಕೊಳ್ಳ, ಬಾಗಲಕೋಟ, ಬೀಳಗಿ ಮುಂತಾದಕಡೆಗೆ ಲಭ್ಯವಾಗಿವೆ. ಮತ್ತು ಇಲ್ಲಿಗೆ ಹೊಂದಿಕೊಂಡಿರುವ ಹಿಂದೆ ಕರ್ನಾಟಕದ ಪ್ರದೇಶದ ಭಾಗವಾಗಿದ್ದ ಆಂದ್ರಪ್ರದೇಶದ ಗಡಿಭಾಗಗಳಾದ ಅನಂತಪುರ, ಆಲಂಪುರ ಇತ್ಯಾದಿಗಳಲ್ಲಿಯೂ ಕಂಡು ಬಂದಿವೆ. ಈ ಸ್ಥಳಗಳಲ್ಲಿ ಒಂದು ಕಾಲದಲ್ಲಿ ರಹಸ್ಯ ತಾಂತ್ರಿಕ ಪಂಥಗಳು ಮಹತ್ವ ಪಡೆದಿದ್ದವು. ಈ ಪ್ರದೇಶಗಳಲ್ಲಿ ದೊರೆತಿರುವ ಲಜ್ಜಾಗೌರಿಯ ಶಿಲ್ಪಗಳು ಇಂದಿಗೂ ನೋಡುಗರಲ್ಲಿ, ಅಧ್ಯಯನಕಾರರಿಗೆ ವಿಶೇಷ ರೀತಿಯ ಭಾವನೆಯನ್ನು, ಕುತೂಹಲವನ್ನು ಉಂಟುಮಾಡುತ್ತಲೆ ಬಂದಿವೆ. ಇವುಗಳ ಕುರಿತು ಕೆಲವು ಲೇಖನಗಳು ಪತ್ರಿಕೆಗಳಲ್ಲಿ ಬಂದಿದ್ದರೂ ಸಮಗ್ರವಾದ ಅಧ್ಯಯನವಾಗದೆ ಹಾಗೆಯೇ ಉಳಿದಿರುವುದು ಕಂಡು ಬಂದಿದ್ದು ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ತಂತ್ರಾಚರಣೆ ಅಥವಾ ವಾಮಾಚಾರ ಪದ್ಧತಿ ಭಾರತದಾದ್ಯಂತ ಹರಡಿದ್ದು ಇದು ಅತ್ಯಂತ ಪ್ರಾಚೀನವಾದ ಒಂದು ಆಚಾರ ಪದ್ದತಿಯಾಗಿದೆ. ಇದು ಹಿಂದೂ ಬೌದ್ಧ ಮತ್ತು ಜೈನ ಧರ್ಮಗಳಲ್ಲಿ ಸಮಾನವಾಗಿ ಈ ಪದ್ದತಿ ಆಚರಣೆಯಲ್ಲಿದ್ದಿತ್ತು. ಲಜ್ಜಾಗೌರಿಯ ಶಿಲ್ಪ ರಚನೆ ಆಚರಣೆ ಜಾನಪದಿಯುವಾಗಿದ್ದು ಈ ಆಚರಣೆಯಲ್ಲಿ ಮಧ್ಯ, ಮಾಂಸ, ಮತ್ತು ಹೆಣ್ಣು (ಮಾನಿನಿ) ಪ್ರಮುಖ ಸ್ಥಾನ ಪಡೆದಿದೆ. ಈ ಹಿನ್ನೆಲೆಯಲ್ಲಿ ಸ್ತ್ರೀ ಯೋನಿ ಭಾಗವನ್ನಾಗಲಿ, ಸ್ಥನ ಭಾಗವನ್ನಾಗಲಿ, ಸೊಂಟದ ಭಾಗವನ್ನಾಗಲಿ, ಉತ್ಪ್ರೇಕ್ಷಿಸಿ ಚಿತ್ರಗಳನ್ನು, ಶಿಲ್ಪಗಳನ್ನು ರಚಿಸುವುದು, ಪುರುಷನ ಲಿಂಗವನ್ನು ಉತ್ಪ್ರೇಕ್ಷಿಸಿ ಶಿಲ್ಪಗಳನ್ನು ರಚಿಸಿ ಆರಾಧಿಸುವುದು. ಈ ಜನಪದೀಯ ತಾಂತ್ರಿಕ ಆಚರಣೆಯ ಒಂದು ಭಾಗವಾಗಿತ್ತು. ಅನೇಕ ಸ್ಥಳಗಳಲ್ಲಿ ಈ ಆಚರಣೆ ಇಂದಿಗೂ ಜೀವಂತವಾಗಿದೆ. ಈ ಹಿನ್ನೆಲೆಯಲ್ಲಿ ಲಜ್ಜಾಗೌರಿ ಶಿಲ್ಪಗಳ ರಚನೆಯಾಗಿರ ಬಹುದು ಎಂದೂ ಊಹಿಸಲಾಗಿದೆ. ಈ ಹಿನ್ನೆಲೆಗಳನ್ನು ಗಮನಿಸಿ ಲಜ್ಜಾಗೌರಿ ಶಿಲ್ಪಗಳನ್ನು ವ್ಯವಸ್ಥಿತವಾಗಿ ಅಧ್ಯಯನ ಮಾಡುವ ಉದ್ದೇಶಗಳನ್ನು ಹೊಂದಲಾಗಿದೆ.

**ಉದ್ದೇಶ**

ಲಜ್ಜಾಗೌರಿ ಶಿಲ್ಪಗಳ ರಚನೆ ಮತ್ತು ಹಿಂದಿನ ಆಚರಣೆ ತುಂಬಾ ಕುತುಹಲ ಕಾರಿಯಾಗಿದೆ. ಲಜ್ಜಾಗೌರಿ ಶಿಲ್ಪಗಳ ಬಗ್ಗೆ ಜನರ ನಂಬಿಕೆ, ಆಚರಣೆಯ ವಿಧಿವಿಧಾನಗಳು, ಶಿಲ್ಪರಚನೆಯ ಇತಿಹಾಸವನ್ನು ಕಟ್ಟಿಕೊಡುವ ಹಿನ್ನೆಲೆಯಿಂದ ಪ್ರಸ್ತುತ ಅಧ್ಯಯನವನ್ನು ಮಾಡುವ ಉದ್ದೇಶ ಹೊಂದಿದೆ. ಅಧ್ಯಯನಕ್ಕೆ ಹಿನ್ನೆಲೆಯಾಗಿ ಮಾತೃದೇವತಾ ಆರಾಧನಾ ಪದ್ದತಿಯನ್ನು ಗಮನಿಸಿ ವಿವರಗಳನ್ನು ಒಂದೆಡೆಗೆ ಅಧ್ಯಯನಕ್ಕೆ ಒಳಪಡಿಸುವ ಉದ್ದೇಶವು ಇಲ್ಲಿದೆ. ಈ ಶಿಲ್ಪಗಳ ರಚನೆಯ ಹಿನ್ನೆಲೆ ಭೌಗೋಳಿಕ ಪರಿಸರದ ಹಿನ್ನೆಲೆ ಮುಂತಾದ ವಿಚಾರಗಳನ್ನು ಕುರಿತು ಅಧ್ಯಯನ ಮಾಡುವ ಆಶಯವು ಪ್ರಸ್ತುತ ಅಧ್ಯಯನದ ಹಿನ್ನೆಲೆಯಲ್ಲಿದೆ. ಆ ಕಾರಣದಿಂದ ಕರ್ನಾಟಕದಲ್ಲಿ ದೊರಕುವ ಲಜ್ಜಾಗೌರಿ ಶಿಲ್ಪಗಳನ್ನು ಅವಿಗಳ ಹಿನ್ನೆಲೆಯಾಗಿಟ್ಟುಕೊಂಡು, ಈ ವಿಶಿಷ್ಟತೆ ಇತ್ಯಾದಿ ಅಂಶಗಳನ್ನು ಅಧ್ಯಯನಕ್ಕೆ ಒಳಪಡಿಸಿ ಅವುಗಳ ರಚನೆಯ ಹಿಂದಿನ ಆಶಯವನ್ನು ಸೂಕ್ಷ್ಮವಾದ ಒಳನೋಟಗಳನ್ನು ಗುರುತಿಸುವ ಪ್ರಯತ್ನ ಈ ಅಧ್ಯಯನದ ಪ್ರಮುಖ ಉದ್ದೇಶಗಳಲ್ಲಿ ಒಂದಾಗಿದೆ.

ಈ ಪ್ರಬಂಧದ ಮೂಲಕೇಂದ್ರ ಕರ್ನಾಟಕದ ಲಜ್ಜಾಗೌರಿ ಶಿಲ್ಪಗಳೇ ಆಗಿವೆ. ಇಲ್ಲಿ ದೊರಕುವ ಶಿಲ್ಪಗಳು ಒಂದಕ್ಕಿಂತ ಒಂದು ಆಚರಣೆಯಲ್ಲಿ ವಿಭಿನ್ನತೆಯನ್ನು ಸ್ವಂತಿಕೆಯನ್ನು ತೋರಿದ್ದರೂ ಮೂಲ ರೂಪ ಮತ್ತು ಉದ್ದೇಶಗಳಲ್ಲಿ ಒಂದೇ ರೀತಿ ಇದೆ. ಹಾಗಿದ್ದರೂ

ರಚನೆಯಲ್ಲಿ ವಿಭಿನ್ನತೆ ಇದೆ. ಈ ವಿಭಿನ್ನತೆಗೆ ಕಾರಣವೇನು ಆಕಾರಗಳಲ್ಲಿ ಕೆಲವಡೆ ಅವು ಬೃಹದಾಕಾರವಾಗಿದ್ದರೆ, ಕೆಲವಡೆ ಸಣ್ಣ ಗಾತ್ರದ ಶಿಲ್ಪಗಳು ದೊರೆತಿವೆ. ಸನ್ನತಿಯಲ್ಲಿ ದೊರಕಿರುವ ಟೆರ್ರಾಕೋಟ ಮಾದರಿಯ ಶಿಲ್ಪವಂತೂ ತೀರಾ ಸಣ್ಣ ಗಾತ್ರದ್ದು ಬಾದಾಮಿಯ ಸಂಗ್ರಹಾಲಯದಲ್ಲಿರುವ ಶಿಲ್ಪ ತುಂಬಾ ದೊಡ್ಡಗಾತ್ರದ್ದು, ಹೀಗೆ ಪ್ರಾದೇಶಿಕ ವೈವಿಧ್ಯತೆಗಳಿಗನುಸಾರವಾಗಿ ಈ ಮಾತೃದೇವತಾ ಆರಾಧನೆಯ ಲಜ್ಜಾಗೌರಿ ಶಿಲ್ಪಗಳು ನಮ್ಮ ಗಮನ ಸೆಳೆಯುತ್ತವೆ. ಇದಕ್ಕೆ ಹಿನ್ನೆಲೆ ಏನಿರಬಹುದು? ತಾಂತ್ರಿಕ ಆಚರಣೆ ಮತ್ತು ನಗ್ನಸ್ತ್ರೀ ಶಿಲ್ಪ ರಚನೆಯ ಹಿನ್ನೆಲೆ ಏನು? ಹೀಗೆ ಹಲವಾರು ಪ್ರಶ್ನೆಗಳಿಗೆ ಉತ್ತರ ಹುಡುಕುವ ಉದ್ದೇಶದಲ್ಲಿ ಈ ಶಿಲ್ಪಗಳ ಅಧ್ಯಯನ ಅತ್ಯಂತ ಕುತೂಹಲ ಮತ್ತು ಮಹತ್ವದ ಅಧ್ಯಯನವಾಗಿದೆ. ಒಟ್ಟಾರೆ ಲಜ್ಜಾಗೌರಿ ಶಿಲ್ಪ ಬೆಳವಣಿಗೆಯ ನೆಲೆ–ಹಿನ್ನೆಲೆಯನ್ನು ಗುರುತಿಸುವ ಮತ್ತು ಶಿಲ್ಪಗಳ ಸ್ವರೂಪದ ಬಗ್ಗೆ ದೃಶ್ಯಕಲೆಯ ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸುವುದು ಮಹತ್ವದ ಉದ್ದೇಶವಾಗಿದೆ. ಶಿಲ್ಪಗಳ ಸೌಂದರ್ಯ, ಕಲಾತ್ಮಕ ರಚನಾ ವಿನ್ಯಾಸ ಮುಂತಾದ ವಿಚಾರಗಳನ್ನು ತಿಳಿಯುವುದಾಗಿದೆ. ಅದಕ್ಕೆ ಪೂರಕವಾಗಿ ಈ ಶಿಲ್ಪಗಳ ಇತಿಹಾಸ ಹಿನ್ನೆಲೆ ಆಚರಣೆ ಮುಂತಾದವು ಪ್ರಮುಖ ಅಂಶಗಳನ್ನು, ಪೂರಕವಾಗಿ ಗಮನಿಸಲಾಗಿದೆ. ಲಜ್ಜಾಗೌರಿ ಶಿಲ್ಪಗಳ ಕಲಾತ್ಮಕ ಶೈಲಿ ವಿನ್ಯಾಸ ಈ ಶಿಲ್ಪಗಳ ಮೇಲೆ ಬೀರಿದ ಜಾನಪದದ ಪ್ರಭಾವ ಹಾಗೆಯೇ ಶಿಷ್ಟಪದ ಕಲೆಯ ಪ್ರಮಾಣ ಬದ್ಧತೆ ಶಾರೀರಿಕ ಅಂಗರಚನಾ ವಿನ್ಯಾಸ, ಇವುಗಳ ಪ್ರಭಾವ, ಪ್ರೇರಣೆ ಇತ್ಯಾದಿ ಅಂಶಗಳನ್ನು ಅಧ್ಯಯನಕ್ಕೆ ಒಳಪಡಿಸಿ ಬೆಳಕಿಗೆ ತರುವುದು ಅಧ್ಯಯನದ ಉದ್ದೇಶವಾಗಿದೆ.

**ಅಧ್ಯಯನದ ಸ್ವರೂಪ**

ಈ ಕಿರು ಸಂಶೋಧನಾ ಪ್ರಭಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಏಳು ಅಧ್ಯಾಯಗಳಾಗಿ ವಿಂಗಡಿಸಿಕೊಂಡಿದ್ದು ಪ್ರತಿಯೊಂದು ಅಧ್ಯಾಯದಲ್ಲಿ ಚರ್ಚಿಸುವ ವಿಷಯವನ್ನು ಕುರಿತಂತೆ ಅದರ ಸಂಕ್ಷಿಪ್ತ ಸ್ವರೂಪದ ವಿವರವನ್ನು ಇಲ್ಲಿ ನೀಡಲಾಗಿದೆ.

**ಅಧ್ಯಾಯ ಒಂದು : ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈದಾನಿಕತೆ.**

ಈ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ, ವೈಧಾನಿಕತೆ ಬಗ್ಗೆ ವಿವರಣೆಯನ್ನು ಮಾಡುತ್ತ ಅಧ್ಯಯನದ ಉದ್ದೇಶವನ್ನು ಸ್ಪಷ್ಟಪಡಿಸಲಾಗಿದೆ. ಮತ್ತು ಇದುವರೆಗೆ ನಡೆದ ಅಧ್ಯಯನದ ಸಮೀಕ್ಷೆಮಾಡಿ ಅಧ್ಯಯನಕ್ಕೆ ಒಂದು ಸ್ಪಷ್ಟತೆಯ ಬುನಾದಿಯನ್ನು ಹಾಕಲಾಗಿದೆ.

**ಅಧ್ಯಾಯ ಎರಡು : ಮಾತೃದೇವತಾ ಆರಾಧನೆ ಮತ್ತು ಲಜ್ಜಾಗೌರಿ ಶಿಲ್ಪಗಳು, ಬೆಳವಣಿಗೆಯ ನೆಲೆ-ಹಿನ್ನೆಲೆ.**

ಈ ಅಧ್ಯಾಯದಲ್ಲಿ ಮಾತೃದೇವತಾ ಶಿಲ್ಪ ಮತ್ತು ಆರಾಧನೆ ಬೆಳೆದುಬಂದ ಹಿನ್ನೆಲೆ ಪಾಶ್ಚಾತ್ಯ ಮತ್ತು ಭಾರತೀಯ ಹಿನ್ನಲೆಯಲ್ಲಿ ಲಜ್ಜಾಗೌರಿ ಶಿಲ್ಪಗಳ ಬೆಳೆವಣಿಗೆಯ ಬಗೆಗೆ ಸ್ಥೂಲವಾಗಿ ಅವುಗಳ ಸಂಬಂಧ ಕುರಿತು ಚರ್ಚಿಸಲಾಗಿದೆ. ಏಶಿಂಯಾ ಖಂಡದಲ್ಲಿ ಮಾತೃದೇವತೆಯ ಕುರಿತಾಗಿ ಸಿಂಧೂ, ಹರಪ್ಪ ಸಂಸ್ಕೃತಿಯ ಹಿನ್ನಲೆಯಲ್ಲಿ ಮತ್ತು ಶಾಕ್ತ ಪಂತದ ತಾಂತ್ರಿಕ ಆಚರಣೆಯ ಕುರಿತು ಚರ್ಚಿಸುತ್ತ ಪ್ರಸ್ತುತ ಮಾತೃದೇವಯತಾ ಆರಾಧನೆ ಮತ್ತು ಲಜ್ಜಾಗೌರಿ ಶಿಲ್ಪಗಳ ಬೆಳವಣಿಗೆಯ ನೆಲೆ ಹಿನ್ನಲೆಯನ್ನು ವಿವರಿಸಲಾಗಿದೆ.

ಭಾರತದ ಬೇರೆ ಬೇರೆ ಭಾಗಗಳಲ್ಲಿ ಕಂಡುಬರುವ ಲಜ್ಜಾಗೌರಿ ಶಿಲ್ಪಗಳು ಉತ್ತರ ಭಾರತದ ಓರಿಸ್ಸಾ, ಮಧ್ಯಪ್ರದೇಶ, ಮಹಾರಾಷ್ಟ್ರ, ದಕ್ಷಿಣ ಭಾರತದ ಆಂದ್ರಪ್ರದೇಶ ಹಾಗೇ ಕರ್ನಾಟಕದಲ್ಲಿ ಮುಖ್ಯವಾಗಿ ಬಾದಾಮಿ ಇನ್ನಿತರ ಪ್ರದೇಶಗಳಲ್ಲಿ ಕಂಡು ಬರುತ್ತವೆ. ಜೊತೆಗೆ ಸಂತಾನದ ಅಭಿವೃದ್ಧಿಗಾಗಿ ಈ ದೇವತೆಯನ್ನು ಪೂಜಿಸುವುದು ಸಾಮಾನ್ಯವಾಗಿದೆ. ಇಂತಹ ಹಲವಾರು ರೀತಿಯ ಉದಾಹರಣೆಗಳ ಹಿನ್ನೆಲೆಯಲ್ಲಿ ಈ ಅಧ್ಯಯನ ಕೈಗೊಳ್ಳಲಾಗಿದೆ.

**ಅಧ್ಯಾಯ ಮೂರು : ಕರ್ನಾಟಕದಲ್ಲಿ ಲಜ್ಜಾಗೌರಿ ಶಿಲ್ಪಗಳ ಪ್ರಮುಖ ನೆಲೆಗಳು, ಶಿಲ್ಪಗಳ ಸ್ವರೂಪ.**

ಈ ಅಧ್ಯಾಯದಲ್ಲಿ ಕರ್ನಾಟಕದಲ್ಲಿ ಲಜ್ಜಾಗೌರಿ ಶಿಲ್ಪಗಳ ಪ್ರಮುಖ ನೆಲೆಗಳು ಶಿಲ್ಪಗಳ ಕುರಿತದ್ದಾಗಿದೆ. ಕರ್ನಾಟಕದಲ್ಲಿ ಲಜ್ಜಾಗೌರಿ ಶಿಲ್ಪಗಳು ಬಾದಾಮಿ, ಸನ್ನತಿ, ಐಹೊಳೆ, ಮಹಾಕೂಟ, ಸಿದ್ದನಕೊಳ್ಳ, ಹುಲಿಗೆಮ್ಮನಕೊಳ್ಳ, ಮಜತಿ, ಬೀಳಗಿ ಬಳ್ಳಿಗಾವಿ ಸ್ಥಳಗಳಲ್ಲಿ ವಿವಿಧ ರೀತಿಯ ಸಂಭೋಗಾವಸ್ಥೆಯಲ್ಲಿರುವ ಲಜ್ಜಾಗೌರಿ ಶಿಲ್ಪಗಳು ಕಂಡುಬರುತ್ತವೆ. ಅಂತೆಯೇ ಸನ್ನತಿಯಲ್ಲಿ ಲಜ್ಜಾಗೌರಿ ಶಿಲ್ಪಗಳು ಸುಟ್ಟ ಮಣ್ಣಿನವುಗಳಾಗಿವೆ. ಬಾದಾಮಿಯಲ್ಲಿರುವ ಶಿಲ್ಪವು ಅಂಗಾತ ಮಲಗಿದ್ದು ಕಾಲುಗಳು ಅಗಲಿಸಿದೆ. ಕೈಯಲ್ಲಿ ತಾವರೆ ಹೂಗಳಿದ್ದು ತಲೆಭಾಗದಲ್ಲಿ ಅರಳಿದ ತಾವರೆಯನ್ನು ಕೆತ್ತಲಾಗಿದೆ. ಹೊಸ ಮಹಾಕೂಟದಲ್ಲಿ ಲಜ್ಜಾಗೌರಿ ಶಿಲ್ಪವು ಭಗ್ನವಾಗಿದ್ದು ಕಂಡು ಬರುತ್ತದೆ. ಇದಲ್ಲದೇ ಐಹೊಳೆಯಲ್ಲಿರುವ ಶಿಲ್ಪ ಭಗ್ನವಾಗಿರುವುದನ್ನು ನಾವು ನೋಡಬಹುದು. ಇಂತಹ ಹಲವಾರು ಶಿಲ್ಪಗಳು ಬೇರೆ ಬೇರೆ ಪ್ರದೇಶದಲ್ಲಿರುವ ಅವುಗಳ ನೆಲೆ ಹಾಗೂ ಸ್ವರೂಪ ಕುರಿತು ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಅಧ್ಯಾಯ ನಾಲ್ಕು : ತಾಂತ್ರಿಕ ಆಚರಣೆ ಮತ್ತು ಲಜ್ಜಾಗೌರಿ ಶಿಲ್ಪಗಳು.**

ಈ ಅಧ್ಯಾಯದಲ್ಲಿ ತಾಂತ್ರಿಕ ಆಚರಣೆ ಮತ್ತು ಲಜ್ಜಾಗೌರಿ ಶಿಲ್ಪಗಳ ವಿವೇಚನೆಯನ್ನು ಇಲ್ಲಿ ಮಾಡಲಾಗಿದೆ. ತಾಂತ್ರಿಕ ಪದ್ಧತಿ ಹಿಂದಿನ ಕಾಲದಲ್ಲಿ ಶೈವರು, ಗಾಣಪತ್ಯರು, ಕೌಲರು, ನಾಗರು, ಶಾಕ್ತರು, ಕಾಪಾಲಿಕರು ಇತ್ಯಾದಿ ಜನಾಂಗದವರು ತಾಂತ್ರಿಕ ಆಚರಣೆಯನ್ನು ಪಾಲಿಸಿರುವುದು ಕಂಡುಬರುತ್ತದೆ. ಆದರೇ ನಿಜಕ್ಕೂ ತಂತ್ರದಲ್ಲಿ ಮಧ್ಯಪಾನ, ಸಂಭೋಗ ಇವೆಲ್ಲವು ಸುಖಗಳನ್ನು ಅನುಭವಿಸುವುದಕ್ಕಲ್ಲ ಅವುಗಳ ಮೂಲಕ ಸರ್ವಶಕ್ತಿಯನ್ನು ಉದ್ದೇಶಿಸಿ ಕೇಂದ್ರಿಕರಿಸಿ ಸೂಕ್ಷ್ಮದಿವ್ಯತೆಯನ್ನು ಹೊಂದುವುದಕೋಸ್ಕರ ಇರುವಂತಹದು ಸರಿಯಾದ ತಾಂತ್ರಿಕನು ಸ್ತ್ರೀಯನ್ನು ಸಂಭೋಗದ ವಸ್ತುವನ್ನಾಗಿ ಉಪಯೋಗಿಸಿ ಅವಳಲ್ಲಿ ದಿವ್ಯ ಶಕ್ತಿಯನ್ನು ಕಾಣಲು ಪ್ರಯುತ್ನಿಸುತ್ತಾನೆ. ಇಂತಹ ತಾಂತ್ರಿಕ ಆಚರಣೆಯ ಹಿನ್ನಲೆಯಲ್ಲಿ ಬೆಳವಣಿಗೆ ಹೊಂದಿರಬಹುದಾದ ಲಜ್ಜಾಗೌರಿ ಶಿಲ್ಪಗಳನ್ನು ಬೇರೆ ಬೇರೆ ನೆಲೆಯಲ್ಲಿ ವಿವೇಚಿಸುವ ಪ್ರಯತ್ನ ಮಾಡಲಾಗಿದೆ.

**ಅಧ್ಯಾಯ ಐದು : ಲಜ್ಜಾಗೌರಿ ಶಿಲ್ಪಗಳು ಮತ್ತು ಲೈಂಗಿಕತೆ.**

ಈ ಅಧ್ಯಾಯದಲ್ಲಿ ಲಜ್ಜಾಗೌರಿ ಶಿಲ್ಪಗಳು ಮತ್ತು ಲೈಂಗಿಕತೆಯನ್ನು ಕುರಿತು ವಿವರಣೆಯನ್ನು ಪ್ರಸ್ತುತ ಅಧ್ಯಾಯದಲ್ಲಿ ನೆಡೆಸಲಾಗಿದೆ. ಲಜ್ಜಾಗೌರಿ ಶಿಲ್ಪಗಳು ಇತರ ಶಿಲ್ಪಗಳಿಗಿಂತ ಭಿನ್ನವಾಗಿವೆ, ಏಕೆಂದರೆ ಶಿಲ್ಪವು ಫಲವಂತಿಕೆಯ ಸಾಂಕೇತಿಕವಾಗಿ ಬೆಳೆದು ಬಂದ ಶಿಲ್ಪವಾಗಿದೆ. ಇಲ್ಲಿ ಕಲಾವಿಧನು ಕಲೆಯಲ್ಲಿ ಚಾಣಾಕ್ಷತೆಯನ್ನು ಮೆರೆದಿದ್ದಾನೆ. ಫಲವಂತಿಕೆಯನ್ನು ಮುಖ್ಯವಾಗಿಟ್ಟುಕೊಂಡು ಅದಕ್ಕೆ ಪ್ರಮುಖವೆನಿಸುವ ಸ್ತ್ರೀಯ ಅಂಗಾಂಗಗಳನ್ನು ಮಾತ್ರ ತೊರಿಸಿದ್ದಾನೆ ಇಲ್ಲಿ ಸ್ತ್ರೀಯನ್ನು ಸುಂದರವಾದ ಮೈಕಟ್ಟಿನೊಂದಿಗೆ ವೃತ್ತಾಕಾರದ ಸ್ಥನಗಳು, ತೊಡೆಗಳು ಸುಂದರವಾಗಿ ಕೆತ್ತಿದ್ದಾನೆ. ಜೊತೆಗೆ ಯೋನಿ ದ್ವಾರವು ಸಂಭೋಗಕ್ಕೆ ಅನುವಾಗಲೆಂದು ಕಾಲುಗಳನ್ನು ಅಗಲಿಸಲಾಗಿದೆ. ಸೃಷ್ಠಿಯ ಮೂಲ ಕಾರಣವಾದ ಭಾಗವನ್ನು ಮಾತ್ರ ತೋರಿಸಿರಬಹುದು. ಈ ಹಿನ್ನೆಲೆಯಲ್ಲಿ ಈ ಅಧ್ಯಯನ ಕೈಗೊಳ್ಳಲಾಗಿದೆ.

**ಅಧ್ಯಾಯ ಆರು : ಲಜ್ಜಾಗೌರಿ ಶಿಲ್ಪಗಳು ಕಲಾಕೃತಿ, ಶೈಲಿ, ವಿನ್ಯಾಸ.**

ಈ ಅಧ್ಯಾಯದಲ್ಲಿ ಲಜ್ಜಾಗೌರಿ ಶಿಲ್ಪಗಳನ್ನು ಕಲಾಕೃತಿ ಹಿನ್ನೆಲೆಯಲ್ಲಿ ಮತ್ತು ಅದರ ರಚನಾ ವಿನ್ಯಾಸ ಶೈಲಿ ತಂತ್ರಗಾರಿಕೆ ಮುಂತಾದ ವೈವಿಧ್ಯತೆಯನ್ನು ಕುರಿತು ಚರ್ಚಿಸಲಾಗಿದೆ. ಬಾದಾಮಿ ಶಿಲ್ಪದಲ್ಲಿ ಹೆಚ್ಚಾಗಿ ಜನನೇಂದ್ರಿಯ ಸ್ಥನ, ತೊಡೆ ಉತ್ಪ್ರೇಕ್ಷಿಸಿ ಕೆತ್ತಿದ್ದಾರೆ ತೊಡೆಗಳನ್ನು ಅಗಲವಾಗಿರಿಸಿ ಧರಿಸಿದ ತೆಳುವಾದ ಬಟ್ಟೆಯನ್ನು ತೊಡೆಗಳ ಎರಡು ಬದಿಗೆ ಸರಿಸಿದಂತೆ

ರಚಿಸಲಾಗಿದೆ. ಈ ದಿಸೆಯಲ್ಲಿ ಸಿದ್ಧನಕೊಳ್ಳದ ಹಾಸುಬಂಡೆಯ ಮೇಲಿರುವ ಶಿಲ್ಪವನ್ನು ನಾವು ನೋಡಬಹುದು. ಈ ಶಿಲ್ಪವು ಸರಳವಾಗಿದ್ದು ತೀರಾ ಉಬ್ಬಿಲ್ಲದ ಸರಳ ಉಬ್ಬು ಶಿಲ್ಪ ಇಲ್ಲಿ ಕಲಾವಿದ, ಅಲ್ಲಿಯ ಒರಟು ಬಂಡೆಯ ಮೇಲೆ ಎಷ್ಟುಸಾಧ್ಯವೋ ಅಷ್ಟು ವಿಷಯಕ್ಕೆ ಪ್ರಾಮುಖ್ಯತೆಕೊಟ್ಟು ಎಲ್ಲಾ ವಿವರಗಳು ತೋರುವಂತೆ ಕಾಣುತ್ತವೆ. ಈ ಶಿಲ್ಪಗಳಿಗೆ ಹೋಲಿಸಿದರೆ ಸನ್ನತಿಯಲ್ಲಿ ದೊರೆತಿರುವ ಶಿಲ್ಪವು ಸುಡಾವೆ ಮಣ್ಣಿನಲ್ಲಿ ರಚಿಸಿರುವ ಈ ಶಿಲ್ಪವು ಆಕಾರದಲ್ಲಿ ಸಣ್ಣದಾಗಿದ್ದರು ಕಲಾತ್ಮಕವಾಗಿದೆ. ಈ ಹಿನ್ನೆಲೆಯಲ್ಲಿ ಈ ಶಿಲ್ಪಗಳ ರಚನೆಯ ತಾಂತ್ರಿಕತೆಯನ್ನು ಪ್ರಮುಖವಾದ ಶೈಲಿ ಅಥವಾ ಲಕ್ಷಣಗಳನ್ನು ಗುರುತಿಸಿ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ಏಳು : ಸಮಾರೋಪ.**

ಈ ಅಧ್ಯಾಯವು ಸಮಾರೋಪವಾಗಿದ್ದು ಈ ಅಧ್ಯಾಯದಲ್ಲಿ ಈ ಹಿಂದಿನ ಆರು ಅಧ್ಯಾಯಗಳ ಸಮಿಕ್ಷೆಯನ್ನು ಒಟ್ಟು ಅಧ್ಯಯನದ ಫಲಿತಗಳನ್ನು ಇಲ್ಲಿ ಸಮೀಕ್ಷಿಸಲಾಗಿದೆ.

**ಅಧ್ಯಯನದ ವ್ಯಾಪ್ತಿ**

ಪ್ರಸ್ತುತ ಅಧ್ಯಯನವನ್ನು ಕರ್ನಾಟಕಕ್ಕೆ ಸೀಮಿತಗೊಳಿಸಿಕೊಳ್ಳಲಾಗಿದೆ. ಕರ್ನಾಟಕದಲ್ಲಿ ಲಜ್ಜಾಗೌರಿ ಶಿಲ್ಪಗಳು ಇದುವರೆಗೆ ಉತ್ತರ ಕರ್ನಾಟಕದಲ್ಲಿ ಸನ್ನತಿ, ಬಾದಾಮಿ, ನಾಗರಾಳ, ಐಹೊಳೆ, ಮಹಾಕೂಟ, ಸಿದ್ದನಕೊಳ್ಳ, ಹುಲಿಗೆಮ್ಮನಕೊಳ್ಳ, ಮಜತಿ, ಬೀಳಗಿ, ಬಳ್ಳಿಗಾವಿ, ಬಾಗಲಕೋಟ, ಇಂತಹ ಹಲವಾರು ಪ್ರದೇಶಗಳಲ್ಲಿ ದೊರಕುವ ಲಜ್ಜಾಗೌರಿ ಶಿಲ್ಪಗಳ ಕುರಿತು ಸಂಪೂರ್ಣವಾದ ಅಧ್ಯಯನ ನಡೆದಿಲ್ಲವಾದ್ದರಿಂದ ಪ್ರಸ್ತುತ ಅಧ್ಯಯನದಲ್ಲಿ ಮುಖ್ಯವಾಗಿ ಕರ್ನಾಟಕದಲ್ಲಿ ದೊರೆಯುವ ಲಜ್ಜಾಗೌರಿ ಶಿಲ್ಪಗಳನ್ನು ಮತ್ತು ಪೂರಕವಾಗಿ ಹೊರ ರಾಜ್ಯಗಳ ಲಜ್ಜಾಗೌರಿ ಶಿಲ್ಪಗಳನ್ನು ಅಧ್ಯಯನಕ್ಕೆ ಬಳಸಿಕೊಂಡು ಅಧ್ಯಯನ ಮಾಡಲಾಗಿದೆ.

**ಅಧ್ಯಯನದ ವೈದಾನಿಕತೆ**

ಈ ಅಧ್ಯಯನಕ್ಕೆ ಎರಡು ರೀತಿಯ ವಿಧಾನಗಳನ್ನು ಬಳಸಿಕೊಳ್ಳಲಾಗಿದೆ, ಅವು ಈ ಕೆಳಗಿನಂತಿವೆ.

**೧. ಮೂಲ ಆಕರ ಸಾಮಗ್ರಿಗಳು.**

**೨. ಅನುಷಂಗಿಕ ಆಕರ ಸಾಮಗ್ರಿಗಳು.**

**೧. ಮೂಲ ಆಕರ ಸಾಮಗ್ರಿಗಳು.**

ಒಂದು ನಾಡಿನ ಸಂಸ್ಕೃತಿ, ಇತಿಹಾಸ, ಕಲೆಗಳಬಗ್ಗೆ ಸಂಶೋಧನೆ ಮಾಡುವಾಗ

ಕ್ಷೇತ್ರಕಾರ್ಯ ಅನಿವಾರ್ಯವಾಗುತ್ತದೆ. ಇದು ಮೂಲ ಆಕರ ಸಾಮಗ್ರಿಗಳಿಂದ ಮಾಹಿತಿ ಸಂಗ್ರಹಿಸಲು ಸುಲಭ ಮಾರ್ಗವಾಗಿದೆ. ಈ ಅಧ್ಯಯನಕ್ಕೆ ಮೂಲ ಆಕರ ಸಾಮಗ್ರಿಯಾಗಿ ಕರ್ನಾಟಕದ ಲಜ್ಜಾಗೌರಿ ಶಿಲ್ಪಗಳು ಒಂದು ದೃಶ್ಯಾತ್ಮಕ ಅಧ್ಯಯನ ಎಂದು ಬಳಸಿಕೊಳ್ಳಲಾಗಿದೆ.

ಈ ಅಧ್ಯಯನದ ಕ್ಷೇತ್ರಕಾರ್ಯವು ಛಾಯಾ ಚಿತ್ರಣ ಮಾಡುವುದು ಸಂಭಾಷಣೆ, ಧ್ವನಿ ಮುದ್ರಣ, ಶಿಲ್ಪಗಳ ಸಂಗ್ರಹಿತ ವಿಷಯದ ಪ್ರತಿಗಳನ್ನು ಸಿದ್ದಪಡಿಸುವಿಕೆ ಸಂಗ್ರಹಾಲಯಗಳಿಗೆ ಭೇಟಿಕೊಟ್ಟು ವಿಷಯ ಸಂಗ್ರಹಮಾಡಿಕೊಂಡಿದೆ. ಅಲ್ಲದೇ ಈ ಕ್ಷೇತ್ರಕಾರ್ಯದಲ್ಲಿ ಶಿಲ್ಪಕಲಾಕ್ಷೇತ್ರದ ಹಲವಾರು ವಿದ್ವಾಂಸರ ಜೊತೆಗೆ ವಿಷಯುಕ್ಕೆ ಸಂಬಂಧಿಸಿದಂತೆ ಚರ್ಚಿಸಿ ಮಾಹಿತಿ ಸಂಗ್ರಹಿಸಲಾಗಿದೆ. ಕ್ಷೇತ್ರಕಾರ್ಯದಿಂದ ದೊರೆತ ವಿವರಗಳನ್ನು ಅಭ್ಯಾಸಕ್ಕೆ ಬರವಣಿಗೆಗೆ ಅನುಕೂಲವಾಗುವಂತೆ ಪಟ್ಟಿಕೆಗಳಲ್ಲಿ ಸಂಗ್ರಹ ಮಾಡಿಕೊಂಡು ಪ್ರಸ್ತುತ ಪ್ರಭಂದವನ್ನು ರಚಿಸಲಾಗಿದೆ.

**೨. ಆನುಷಂಗಿಕ ಆಕರ ಸಾಮಗ್ರಿ.**

ಪ್ರಬಂಧ ರಚಿಸುವಲ್ಲಿ ಎರಡನೇ ವಿಧಾನ ಆನುಷಂಗಿಕ ಆಕರ ಸಾಮಗ್ರಿಯಾಗಿದ್ದು ಇದರಲ್ಲಿ ಸಂಶೋಧನಾ ಮಹಾ ಪ್ರಬಂಧಗಳು ಪ್ರಕಟಿತ, ಅಪ್ರಕಟಿತ, ಸಾಹಿತ್ಯ ಕೃತಿಗಳು, ಶಾಸನ ಸಂಪುಟಗಳು, ನಿಘಂಟುಗಳು, ವಿಶ್ವಕೋಶಗಳು, ಗ್ಯಾಸಟಿಯರಗಳು, ಅಭಿನಂದನಾ ಗ್ರಂಥಗಳು, ಅನುವಾದ ಗ್ರಂಥಗಳು ಮುಂತಾದವುಗಳನ್ನು ಅಧ್ಯಯನದ ಆನುಷಂಗಿಕ ಆಕರ ಸಾಮಗ್ರಿಗಳಾಗಿ ಬಳಸಿಕೊಳ್ಳಲಾಗಿದೆ. ಹಾಗೆಯೇ ಬೇರೆ ಬೇರೆ ಸ್ಥಳಗಳಲ್ಲಿನ ಗ್ರಂಥಾಲಯಗಳಿಗೆ ಭೇಟಿ ನೀಡಿ ಅಧ್ಯಯನ ಮಾಡಲಾಗಿದೆ. ಕ್ಷೇತ್ರಕಾರ್ಯದಿಂದ ದೊರೆತ ಮೂಲ ಆಕರ ಸಾಮಗ್ರಿ ಮಾಹಿತಿಯನ್ನು ಪಟ್ಟಿಕೆಗಳಲ್ಲಿ ಸಂಗ್ರಹ ಮಾಡಿಕೊಂಡು ಆನುಷಂಗಿಕ ಮಾಹಿತಿಯನ್ನು ಸಂಗ್ರಹ ಮಾಡಿಕೊಂಡು ಪ್ರಸ್ತುತ ಕಿರು ಪ್ರಬಂಧವನ್ನು ಸಿದ್ದಪಡಿಸಲಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಕ್ಷೇತ್ರಕಾರ್ಯ ಸಂಶೋಧನ ವಿಧಾನವನ್ನು ಅಳವಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ಲಜ್ಜಾಗೌರಿ ಶಿಲ್ಪಗಳ ನೆಲೆಗಳನ್ನು ಹುಡುಕಿ ಮೂಲ ಸ್ಥಳಗಳಿಗೆ ಹೋಗಿ ಜನರ ಸಂದರ್ಶನ ಮಾಡಿ ಸ್ಥಳೀಯರಿಂದ ಮಾಹಿತಿ ಪಡೆದು ಮೂಲ ಶಿಲ್ಪಗಳ ಛಾಯಾಚಿತ್ರಗಳನ್ನು ತೆಗೆದುಕೊಂಡು ಪ್ರಸ್ತುತ ಅಧ್ಯಯನವನ್ನು ರೂಪಿಸಲಾಗಿದೆ.

**ಚಿತ್ರಕಲಾ ಕ್ಷೇತ್ರದಲ್ಲಿ ಇಲ್ಲಿಯವರೆಗೆ ನಡೆದ ಅಧ್ಯಯನಗಳು.**

ಕರ್ನಾಟಕದ ಸಂದರ್ಭದಲ್ಲಿ ಚಿತ್ರಕಲಾ ಕ್ಷೇತ್ರದಲ್ಲಿ ಹೆಚ್ಚಿನ ಸಂಶೋಧನಾ ಅಧ್ಯಯನಗಳು ನಡೆದಿಲ್ಲವೆಂದು ಹೇಳಬಹುದಾಗಿದೆ. ಏಕೆಂದರೆ ವಿಶ್ವವಿದ್ಯಾಲಯ ಮಟ್ಟದಲ್ಲಿ ಚಿತ್ರಕಲೆಗಳ ಕುರಿತಾದ ಅಧ್ಯಯನಕ್ಕೆ ಅವಕಾಶ ದೊರೆತಿದ್ದು. ತೀರ ಇತ್ತೀಚಿಗಷ್ಟೆ. ೯೦ರ ದಶಕದಲ್ಲಿ ಈ ಅಧ್ಯಯನಗಳು ತೀವ್ರಗೊಂಡು ಈಗಷ್ಟೇ ತನ್ನ ಶೈಶವಾಸ್ಥೆಯನ್ನು ಕಳೆದು ಯೌವ್ವನಕ್ಕ ಕಾಲಿಡುತ್ತಿದೆ. ೧೯೮೦ ರ ದಶಕದಿಂದ ಕರ್ನಾಟಕದಲ್ಲಿ ನಡೆದ ದೃಶ್ಯಕಲಾ ಅಧ್ಯನಗಳ ಸ್ಥೂಲವಾದ ವಿವರವನ್ನು ಈ ಕೆಳಗೆ ಸಮೀಕ್ಷಿಸಿ ಕೊಡಲಾಗಿದೆ.

೧೯೮೦ರ ದಶಕದಿಂದ ಕರ್ನಾಟಕದ ದೃಶ್ಯಕಲಾ ಕ್ಷೇತ್ರದಲ್ಲಿ ಮೊದಲಬಾರಿಗೆ ವಿಶ್ವ ವಿದ್ಯಾಲಯ ಮಟ್ಟದಲ್ಲಿ ಚಿತ್ರಕಲೆ ಕುರಿತು ಸಂಶೋಧನಾತ್ಮಕ ಅಧ್ಯಯನ ಪ್ರಾರಂಭಗೊಡಿರುವದು ಕಂಡುಬರುತ್ತದೆ. ಡಾ.ಎಸ್.ಸಿ.ಪಾಟೀಲರು ೧೯೮೩ ರಲ್ಲಿ ಕರ್ನಾಟಕ ವಿ.ವಿ.ಯ ಸ್ನಾತಕೋತ್ತರ ಶಿಕ್ಷಣ ವಿಭಾಗಕ್ಕೆ ಮಂಡಿಸಿದ **ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ: ಒಂದು ಅಧ್ಯಯನ**[೧] ಎಂಬ ಸಂಶೋಧನಾ ಕಿರು ಪ್ರಬಂಧವು ಈ ಕ್ಷೇತ್ರದ ಪ್ರಥಮ ಅಧ್ಯಯನದ ಕಾರ್ಯವೆಂದು ದಾಖಲಾಗಿದೆ. ೧೯೮೭ರಲ್ಲಿ ಡಾ.ಬಿ.ಕೆ. ಹಿರೇಮಠ ರವರು **ಕನ್ನಡ ಹಸ್ತ ಪ್ರತಿಗಳು ಒಂದು ಅಧ್ಯಯನ**[೨] ಎಂಬ ಪಿ.ಹೆಚ್.ಡಿ ಮಹಾಪ್ರಬಂಧದಲ್ಲಿ ಹಸ್ತಪ್ರತಿ ಚಿತ್ರಕಲೆ ಕುರಿತಂತೆ ಕೆಲವು ಅಧ್ಯಾಯಗಳನ್ನು ಮೀಸಲಾಗಿಟ್ಟು ಅಧ್ಯಯನ ಮಾಡಿದ್ದಾರೆ. ಇದರ ನಂತರ ೧೯೯೧ರಲ್ಲಿ ಕರ್ನಾಟಕದಲ್ಲಿ ಜನಪದ ಚಿತ್ರಕಲೆಯನ್ನೆ ಸಂಶೋಧನೆಯ ಮುಖ್ಯವಿಷಯವನ್ನಾಗಿಟ್ಟುಕೊಂಡು ಕರ್ನಾಟಕ ವಿ.ವಿ.ಗೆ ಮಂಡಿಸಿದ ಪಿಹೆಚ್.ಡಿ. ಮಹಾಪ್ರಬಂಧ ಕರ್ನಾಟಕ ಜನಪದ ಚಿತ್ರಕಲೆ[೩] ಈ ಮಹಾ ಪ್ರಬಂಧವನ್ನು ಡಾ.ಎಸ್.ಸಿ.ಪಾಟೀಲರು ಸಿದ್ದಪಡಿಸಿದ್ದು ದೃಶ್ಯಕಲಾ ಕ್ಷೇತ್ರದ ಮೊದಲ ಅಧ್ಯಯನ ಎಂಬ ಅಗ್ಗಳಿಕೆಗೆ ಪಾತ್ರವಾಗಿದೆ. ನಂತರದ ದಿನಗಳಲ್ಲಿ ೧೯೯೫ರಲ್ಲಿ ಡಾ.ಅ.ಲ.ನರಸಿಂಹನ್ ಅವರು ಬೆಂಗಳೂರು ವಿ.ವಿ.ಗೆ ಮಂಡಿಸಿದ ಪಿಹೆಚ್.ಡಿ. ಮಹಾಪ್ರಬಂಧ **ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು**[೪] ೧೯೯೭ರಲ್ಲಿ ಡಾ.ಸಂಪಧಾ ಭಟ್ ಅವರ

---

೦೧. ಡಾ. ಎಸ್.ಸಿ.ಪಾಟೀಲ : ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ, ಕರ್ನಾಟಕ ವಿ.ವಿ. ೧೯೮೩

೦೨. ಡಾ. ಬಿ.ಕೆ ಹಿರೇಮಠ : ಕನ್ನಡ ಹಸ್ತ ಪ್ರತಿಗಳು, ಪಿಹೆಚ್.ಡಿ.ಮ.ಪ್ರ. ಕರ್ನಾಟಕ ವಿ.ವಿ. ೧೯೮೭

೦೩. ಡಾ. ಎಸ್.ಸಿ.ಪಾಟೀಲ : ಕರ್ನಾಟಕ ಜನಪದ ಚಿತ್ರಕಲೆ, ಪಿಹೆಚ್.ಡಿ.ಮ.ಪ್ರ. ೧೯೯೧

೦೪. ಡಾ. ಅ.ಲ.ನರಸಿಂಹನ್ : ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕಂಶಗಳು, ಪಿಹೆಚ್.ಡಿ.ಮ.ಪ್ರ. ಬೆಂಗಳೂರು ವಿ.ವಿ. ೧೯೯೫

**ಹಿಂದೂಸ್ಥಾನಿ ಸಂಗೀತ ಹಾಗೂ ರಾಗಮಾಲ ಚಿತ್ರಗಳು**[೫] ಬೆಂಗಳೂರು ವಿಶ್ವವಿದ್ಯಾಲಯಕ್ಕೆ ೧೯೯೭ರಲ್ಲಿ ಡಾ.ಪುಷ್ಪಾ ದ್ರಾವಿಡ ಇವರು ಮಂಡಿಸಿದ **ಅನಿವಾಸಿ ಭಾರತೀಯ ಕಲಾವಿದ ದಿ.ನಿಕೋಲಸ್ ರೋರಿಕ ಜೀವನ ಮತ್ತು ಕಲಾಕೃತಿಗಳು**[೬] ೨೦೦೦ರಲ್ಲಿ ಡಾ.ಯಾದಪ್ಪ ಪರದೇಶಿಯವರ **ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ, ಒಂದು ಅಧ್ಯಯನ**[೭] ೨೦೦೨ರಲ್ಲಿ ಡಾ.ಶಿವಾನಂದ ಬಂಟನೂರ ಇವರ **ಕರ್ನಾಟಕದ ಜನಪದ ಶಿಲ್ಪಕಲೆ, ಒಂದು ಅಧ್ಯಯನ,**[೮] ೨೦೦೨ರಲ್ಲಿ ಡಾ. ಗಿರೀಶ ಅವರ **ಬುಡಕಟ್ಟು ಚಿತ್ರಕಲೆ,**[೯] ೨೦೦೨ರಲ್ಲಿ ಡಾ. ಲಕ್ಷ್ಮೀದೇವಿ ಗವಾಯಿಯವರ ಕಲಾವಿದ **ಎಂ.ಎ.ಚೆಟ್ಟಿಯವರ ಜೀವನ ಕಲಾಕೃತಿಗಳು-ಒಂದು ಅಧ್ಯಯನ**[೧೦] ೨೦೦೨ರಲ್ಲಿ ಶರಣಪ್ಪ ಕೋಲ್ಕಾರ ಅವರ **ಕೊಪ್ಪಳ-ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಕಾಲದ ಕಲೆ**[೧೧] ೨೦೦೨ರಲ್ಲಿ ಡಾ. ಸೌಮ್ಯ ಅವರ **ಯಂತ್ರಾದಿ ವಿಜುವಲ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫರೆನ್ಸ್ ಟು ಕಾಂಟೆಂಪರರಿ ತಾಂತ್ರಿಕ ಆರ್ಟಿಸ್**[೧೨] ೨೦೦೨ರಲ್ಲಿ ಡಾ. ಪ್ರಮೀಳಾ ಲೋಚನ ಅವರ **ಮೈಂಡ್ ಮ್ಯೂಜಿಕ್ ಅಂಡ್ ಕಲರ್ ಎಕ್ಸಪೋಜಿಸ್ ಅಂಡ್ ಡೆವಲಪ್ಮೆಂಟ್ ಆಫ್ ರಾಗಮಾಲಾ ಅಂಡ್ ಕಾಂಟೆಂಪರರಿ ಪೇಂಟಿಂಗ್**[೧೩] ೨೦೦೩ರಲ್ಲಿ ಡಾ. ವೀಣಾ ಶೇಖರ ಮಂಡಿಸಿದ **ಎ ಸ್ಟಡಿ ಆಫ್ ಹಿಸ್ಟಾರಿಕಲ್ ಪೇಂಟಿಂಗ್ ಆಫ್ ಕರ್ನಾಟಕ (೧೭೮೦-೧೮೨೦)**[೧೪] ೨೦೦೩ರಲ್ಲಿ ಡಾ.ಸಿದ್ದಲಿಂಗಸ್ವಾಮಿ ಹಿರೇಮಠ ಅವರ **ಕಲಾವಿದ ಆರ್.ಎಮ್.ಹಡಪದ ಒಂದು ಅಧ್ಯಯನ,**[೧೫]

---

೦೫. ಡಾ. ಸಂಪದಾ ಭಟ್ : ಹಿಂದೂಸ್ತಾನಿ ಸಂಗೀತ ಹಾಗೂ ರಾಗಮಾಲಾ ಚಿತ್ರಗಳು, ಪಿಹೆಚ್.ಡಿ.ಮ.ಪ್ರ. ಕನ್ನಡ ವಿ.ವಿ. ೧೯೯೭

೦೬. ಡಾ. ಪುಷ್ಪಾ ದ್ರಾವಿಡ : ಅನಿವಾಸಿ ಭಾರತೀಯ ಕಲಾವಿದ ದಿ.ನಿಕೋಲಸ್ ರೋರಿಕ್ ಜೀವನ ಮತ್ತು ಕಲಾಕೃತಿಗಳು. ಪಿಹೆಚ್.ಡಿ.ಮ.ಪ್ರ. ಬೆಂಗಳೂರು. ವಿ.ವಿ. ೧೯೯೭

೦೭. ಡಾ. ಯಾದಪ್ಪ ಪರದೇಶಿ : ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ, ಪಿಹೆಚ್.ಡಿ.ಮ.ಪ್ರ. ಕನ್ನಡ ವಿ.ವಿ. ೨೦೦೦

೦೮. ಡಾ. ಶಿವಾನಂದ ಬಂಟನೂರ : ಕರ್ನಾಟಕದ ಜನಪದ ಶಿಲ್ಪಕಲೆ, ಒಂದು ಅಧ್ಯಯನ ಪಿಹೆಚ್.ಡಿ.ಮ.ಪ್ರ. ಕನ್ನಡ ವಿ.ವಿ. ೨೦೦೨

೦೯. ಡಾ. ಗಿರೀಶ : ಬುಡಕಟ್ಟು ಚಿತ್ರಕಲೆ ಪಿಹೆಚ್.ಡಿ.ಮ.ಪ್ರ. ಕನ್ನಡ ವಿ.ವಿ. ೨೦೦೨

೧೦. ಡಾ. ಲಕ್ಷ್ಮೀದೇವಿ ಗವಾಯಿ : ಕಲಾವಿದ ಎಂ.ಎ. ಚಟ್ಟಿಯವರ ಜೀವನ ಕಲಾಕೃತಿಗಳು-ಒಂದು ಅಧ್ಯಯನ ಪಿಹೆಚ್.ಡಿ.ಮ.ಪ್ರ. ಕನ್ನಡ ವಿ.ವಿ. ೨೦೦೨

೧೧. ಡಾ. ಶರಣಪ್ಪ ಕೊಲ್ಕಾರ : ಅವರ ಕೊಪ್ಪಳ-ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಕಾಲದ ಕಲೆ, ಪಿಹೆಚ್.ಡಿ.ಮ.ಪ್ರ. ಕನ್ನಡ ವಿ.ವಿ. ೨೦೦೨

೧೨. ಡಾ. ಸೌಮ್ಯ : ಯಂತ್ರಾ ದಿ ವಿಜುವಲ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫರೆನ್ಸ್ ಟು ಕಾಂಟೆಂಪ್ರರಿ ತಾಂತ್ರಿಕ ಆರ್ಟಿಸ್ಟ್, ಪಿಹೆಚ್.ಡಿ.ಮ.ಪ್ರ. ಬೆಂಗಳೂರು ವಿ.ವಿ. ೨೦೦೨

೧೩. ಡಾ. ಪ್ರಮಿಳಾ ಲೋಚನ್ : ಮೈಂಡ ಮ್ಯೂಜಿಕ್ ಅಂಡ್ ಕಲರ ಎಕ್ಸಪೋಜಿಸ್ ಅಂಡ್ ಡೆವಲಪ್ಮೆಂಟ್ ಆಫ್ ರಾಗಮಾಲಾ ಅಂಡ್ ಕಂಟೆಂಪ್ರರಿ ಪೆಂಟಿಂಗ್ ಪಿಹೆಚ್.ಡಿ.ಮ.ಪ್ರ. ಬೆಂಗಳೂರು ವಿ.ವಿ ೨೦೦೨

೧೪. ಡಾ. ವೀಣಾ ಶೇಖರ : ಎ ಸ್ಟಡಿ ಆಫ್ ಹಿಸ್ಟಾರಿಕಲ್ ಪೇಂಟಿಂಗ್ ಆಫ್ ಕರ್ನಾಟಕ (೧೭೮೦-೧೮೨೦) ಪಿಹೆಚ್.ಡಿ.ಮ.ಪ್ರ. ಬೆಂಗಳೂರು ವಿ.ವಿ. ೨೦೦೩

೧೫. ಡಾ. ಸಿದ್ದಲಿಂಗಸ್ವಾಮಿ ಹಿರೇಮಠ : ಕಲಾವಿದ ಆರ್.ಎಂ.ಹಡಪದ ಒಂದು ಅಧ್ಯಯನ. ಪಿಹೆಚ್.ಡಿ.ಮ.ಪ್ರ. ಕನ್ನಡ ವಿ.ವಿ. ೨೦೦೩

೨೦೦೩ರಲ್ಲಿ ಡಾ.ಎಸ್.ಸಿ.ಪಾಟೀಲರು ಕರ್ನಾಟಕ ವಿ.ವಿ.ಗೆ ಮಂಡಿಸಿದ **ಎಕ್ರಿಟಿಕಲ್ ಎನಾಲಿಸಿಸ್ ಆಫ್ ಆರ್ಟ ಎಜ್ಯುಕೇಶನ್ ಎಟ್ ಸ್ಕೂಲ ಲೆವಲ್ ಇನ್ ಕರ್ನಾಟಕ ಸ್ಟೇಟ್ ವಿತ್ ಸ್ಪೇಷಲ್ ರೆಫರೆನ್ಸ್ ಟು ಡ್ರಾಯಿಂಗ ಆಂಡ್ ಪೇಂಟಿಂಗ್**[೧೬] ೨೦೦೪ರಲ್ಲಿ ಡಾ. ವಿ.ಎವ್ ಬಾಗಾಯತ ಅವರ **ಕರ್ನಾಟಕ ಮುಸ್ಲಿಂ ಅರಸರ ಕಾಲದ ಚಿತ್ರಕಲೆ, ಒಂದು ಅಧ್ಯಯನ** (೧೪೦೦-೧೮೦೦)[೧೭] ೨೦೦೪ರಲ್ಲಿ ಡಾ. ಶಿವುಕುಮಾರ ಎ.ಓ.ಅವರ **ಕರ್ನಾಟಕದ ಸಮಕಾಲಿನ ಉತ್ಸವಗಳು,ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮುಗಳು,**[೧೮] ೨೦೦೫ರಲ್ಲಿ ಡಾ.ಶಶಿಕಲಾ ಹೂಗಾರ ಅವರ **ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ,**[೧೯] ೨೦೦೫ರಲ್ಲಿ ಡಾ.ಶಿವಪ್ರಕಾಶ ತುಕ್ಕಣ್ಣವರ ಅವರ **ಕರ್ನಾಟಕ ರಥ ಶಿಲ್ಪಕಲೆ,**[೨೦] ೨೦೦೫ರಲ್ಲಿ ಡಾ.ಎಚ್.ಎನ್ ಚಿತ್ರಗಾರ ಅವರ **ಕರ್ನಾಟಕ ಹಸ್ತಪ್ರತಿ ಚಿತ್ರಕಲೆ,**[೨೧] ೨೦೦೫ರಲ್ಲಿ ಡಾ.ಎಸ್.ವಿ.ವೆಂಕಟೇಶಯ್ಯ ಅವರ **ಅಜಂತಾ ಗುಹೆಯ ವರ್ಣ ಚಿತ್ರಗಳಲ್ಲಿ ವಾಸ್ತು ಅಂಶಗಳು ಒಂದು ಅಧ್ಯಯನ,**[೨೨] ೨೦೦೬ರಲ್ಲಿ ಡಾ.ವಿಶ್ವೇಶ್ವರಿ ತಿವಾರಿ ಅವರ **ರಂಗೋಲಿ ಕಲೆ,**[೨೩] ೨೦೦೭ರಲ್ಲಿ ಡಾ. ಗೀತಾಂಜಲಿ ಬಿ.ಆರ್ ಅವರ **ಕರ್ನಾಟಕದ ಐತಿಹಾಸಿಕ ದೀಪಸ್ತಂಬಗಳು ಮೈಸೂರು ಪ್ರದೇಶವನ್ನು ಅನುಲಕ್ಷೀಸಿ,**[೨೪] ಹಾಗೂ ೨೦೦೭ರಲ್ಲಿಂಯೇ ಬಂದ ಡಾ.ಎವ್.ಸಿ.ಮಲ್ಲಿಕಾರ್ಜುನ ಬಾಗೋಡಿಯುವರ **ಸುರಪುರ ಶೈಲಿಯ ಚಿತ್ರಕಲೆ,**[೨೫] ಇವು ಚಿತ್ರಕಲೆಯು ಕುರಿತು ಬಂದ ಪಿಹೆಚ್.ಡಿ ಮಹಾಪ್ರಬಂಧಗಳು ೨೦೦೫ರಲ್ಲಿ ಡಾ. ಆನಂದ ಪೂಜಾರ ಅವರ **ಕರಾವಳಿ ಕರ್ನಾಟಕದ ಕಾವಿ ಚಿತ್ರಕಲೆ,**[೨೬] ೨೦೦೫ರಲ್ಲಿ ಡಾ. ಡಿ. ಎ.ಉಪಾಧ್ಯ

---

೧೬. ಡಾ. ಎಸ್.ಸಿ. ಪಾಟೀಲ : ಎ ಕ್ರಿಟಿಕಲ್ ಎನಾಲಿಸಿಸ್ ಆಫ್ ಆರ್ಟ್ ಎಜುಕೇಶನ್ ಅಟ್ ಸ್ಕೂಲ್ ಲೆವಲ್ ಇನ್ ಕರ್ನಾಟಕ ಸ್ಟೇಟ್ ವಿತ್ ಸ್ಪೇಶಲ್ ರೆಫರೆನ್ಸ ಟು ಡ್ರಾಯಿಂಗ್ ಅಂಡ್ ಪೆಂಟಿಂಗ, ಕರ್ನಾಟಕ ವಿ.ವಿ. ೨೦೦೩

೧೭. ಡಾ. ವಿ.ಎಂ. ಬಾಗಾಯತ್ : ಕರ್ನಾಟಕ ಮುಸ್ಲಿಂ ಅರಸರ ಕಾಲದ ಚಿತ್ರಕಲೆ ಒಂದು ಅಧ್ಯಯನ, (೧೪೦೦-೧೮೦೦) ಪಿಹೆಚ್.ಡಿ.ಮ.ಪ್ರ. ಕನ್ನಡ ವಿ.ವಿ. ೨೦೦೪

೧೮. ಡಾ. ಶಿವಕುಮಾರ ಎ.ಓ. : ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮುಗಳು, ಪಿಹೆಚ್.ಡಿ.ಮ.ಪ್ರ. ಗು.ವಿ.ಗು ೨೦೦೪

೧೯. ಡಾ. ಶಶಿಕಲಾ ಹೂಗಾರ : ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ, ಪಿಹೆಚ್.ಡಿ.ಮ.ಪ್ರ. ಕನ್ನಡ ವಿ.ವಿ. ೨೦೦೫

೨೦. ಡಾ. ಶಿವಪ್ರಕಾಶ ತುಕ್ಕಣ್ಣವರ : ಕರ್ನಾಟಕ ರಥ ಶಿಲ್ಪಕಲೆ, ಪಿಹೆಚ್.ಡಿ.ಮ.ಪ್ರ. ಕನ್ನಡ ವಿ.ವಿ ೨೦೦೫

೨೧. ಡಾ. ಎಚ್.ಎನ್. ಚಿತ್ರಗಾರ : ಕರ್ನಾಟಕ ಹಸ್ತಪ್ರತಿ ಚಿತ್ರಕಲೆ, ಪಿಹೆಚ್.ಡಿ.ಮ.ಪ್ರ. ಕನ್ನಡ ವಿ.ವಿ. ೨೦೦೫

೨೨. ಡಾ. ಎಸ್.ವಿ. ವೆಂಕಟೇಶಯ್ಯ : ಅಜಂತಾ ಗುಹೆಯ ವರ್ಣಚಿತ್ರಗಳಲ್ಲಿ ವಾಸ್ತು ಅಂಶಗಳು ಒಂದು ಅಧ್ಯಯನ, ಪಿಹೆಚ್.ಡಿ.ಮ.ಪ್ರ. ಕನ್ನಡ ವಿ.ವಿ. ೨೦೦೫

೨೩. ಡಾ. ವಿಶ್ವೇಶ್ವರಿ ತಿವಾರಿ : ರಂಗೋಲಿ ಚಿತ್ರಕಲೆ, ಪಿಹೆಚ್.ಡಿ.ಮ.ಪ್ರ. ಗು.ವಿ.ವಿ ೨೦೦೬

೨೪. ಡಾ. ಗೀತಾಂಜಲಿ ಆಚಾರ್ಯ : ಐತಿಹಾಸಿಕ ದೀಪಸ್ತಂಬಗಳು, ಪಿಹೆಚ್.ಡಿ.ಮ.ಪ್ರ. ಕನ್ನಡ ವಿ.ವಿ. ೨೦೦೭

೨೫. ಡಾ. ಮಲ್ಲಿಕಾರ್ಜುನ ಬಾಗೋಡಿ : ಸುರಪುರ ಶೈಲಿಯ ಚಿತ್ರಕಲೆ, ಪಿಹೆಚ್.ಡಿ.ಮ.ಪ್ರ. ಗು.ವಿ.ವಿ ೨೦೦೭

೨೬. ಡಾ. ಆನಂದ ಕೆ. ಪೂಜಾರ : ಕರಾವಳಿ ಕರ್ನಾಟಕದ ಕಾವಿ ಚಿತ್ರಕಲೆ, ಡಿ.ಲಿಟ್.ಮ.ಪ್ರ. ಕನ್ನಡ ವಿ.ವಿ ೨೦೦೫

ಅವರ **ದೃಶ್ಯಕಲೆಗಳ ತೌಲನಿಕ ಅಧ್ಯಯನ,**[೨೭] ಡಿ.ಲಿಟ್. ಮಹಾಪ್ರಬಂಧಗಳಾಗಿವೆ.

೨೦೦೨ರಲ್ಲಿ ಮಲ್ಲಿಕಾರ್ಜುನ ಬಾಗೋಡಿಯವರು ಎಂ.ಫಿಲ್.ಪದವಿಗಾಗಿ ಮಂಡಿಸಿದ **ಚಿತ್ರಕಲಾವಿದ ಜೆ.ಎಸ್ ಖಂಡೇರಾವ್-ಒಂದು ಅಧ್ಯಯನ,**[೨೮] ಮತ್ತು ೨೦೦೩ರಲ್ಲಿ ಎ.ಎಸ್.ವಿಶ್ವನಾಥ ಅವರ **ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣ,**[೨೯] ೨೦೦೫ರಲ್ಲಿ ಶಂಕರಪ್ಪ ಎಂ.ಕುಂದಗೋಳ ಅವರ **ಕಲಾವಿದ ಡಿ.ವಿ.ಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು,**[೩೦] ಮತ್ತು ಸಿ.ಡಿ.ಜಟ್ಟೆಣ್ಣವರ ಅವರ **ಕಲಾವಿದ ಡಾ.ಎಂ.ವಿ.ಮಿಣಜಗಿಯವರ ಜೀವನ ಮತ್ತು ಕಲಾಕೃತಿಗಳು,**[೩೧] ೨೦೦೬ರಲ್ಲಿ ರವಿ ವಸರಾಮ ನಾಯಕ ಇವರ **ಕಿನ್ನಾಳ ಕಲೆ ಒಂದು ಅಧ್ಯಯನ,**[೩೨] ಸುಚಿತ್ರಾ.ಗ.ಲಿಂಗದಳ್ಳಿ ಇವರ **ವಿಜಯನಗರದ ಭಿತ್ತಿ ಚಿತ್ರಕಲೆ ಒಂದು ಅಧ್ಯಯನ,**[೩೩] ಶಶಿಕಾಂತ. ಕೆ. ಬಸರಿಕಟ್ಟಿ ಇವರ **ಕಲಘಟಗಿಯ ಕಲೆ ಒಂದು ಅಧ್ಯಯನ,**[೩೪] ಬಿ.ಎಂ.ಪಾಟೀಲ ಇವರ **ನಿಪ್ಪಾಣಿ ವಾಡೆ ಚಿತ್ರಕಲೆ ಒಂದು ಅಧ್ಯಯನ,**[೩೫] ಉಮೇಶ. ಎಸ್. ಇವರ **ಜೈನ ಚಿತ್ರಕಲೆ ಒಂದು ಅಧ್ಯಯನ,**[೩೬] ಶೈಲಾ ಬರಡೋಲ ಇವರ **ಸಂತ ಶುಬ್ಬರಾಯ ಜೀವನ ಮತ್ತು ಕಲಾಕೃತಿಗಳು ಒಂದು ಅಧ್ಯಯನ**[೩೭] ಮತ್ತು ಈ ಪ್ರಬಂಧಗಳು ಕರ್ನಾಟಕ ದೃಶ್ಯಕಲೆಯ ಕುರಿತಾಗಿ ಬಂದ ಎಂ.ಫಿಲ್ ಸಂಶೋಧನಾ ಅಧ್ಯಯನಗಳಾಗಿವೆ. ಹೀಗೆ ಗುಲಬರ್ಗಾ, ಬೆಂಗಳೂರ ಕರ್ನಾಟಕ ವಿ.ವಿ. ಮತ್ತು ಕನ್ನಡ ವಿ.ವಿ.ಗಳಲ್ಲಿ ಪಿಹೆಚ್,ಡಿ ಅಧ್ಯಯನಕ್ಕಾಗಿ ಸುಮಾರು ೨೫ ಕ್ಕೂ ಹೆಚ್ಚು ಸಂಶೋಧನಾ ಪ್ರಬಂಧಗಳು ರಚನೆಯಾಗಿವೆ. ಮತ್ತು ೧೫ ಕ್ಕೂ ಹೆಚ್ಚು

---

೨೭. ಡಾ. ಡಿ.ಎ. ಉಪಾದ್ಯ : ದೃಶ್ಯಕಲೆಗಳ ತೌಲನಿಕ ಅಧ್ಯಯನ, ಡಿ.ಲಿಟ್. ಮ.ಪ್ರ. ಕನ್ನಡ ವಿ.ವಿ. ೨೦೦೫

೨೮. ಮಲ್ಲಿಕಾರ್ಜುನ ಬಾಗೋಡಿ : ಚಿತ್ರಕಲಾವಿದ ಜೆ.ಎಸ್. ಖಂಢೇರಾವ- ಒಂದು ಅಧ್ಯಯನ, ಎಂ.ಫಿಲ್. ಪ್ರ.ಕ.ವಿ.ವಿ. ಹಂಪಿ. ೨೦೦೨

೨೯. ಎ.ಎಸ್. ವಿಶ್ವನಾಥ : ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಶಭೂಷಣ, ಎಂ.ಫಿಲ್. ಪ್ರ.ಕ.ವಿ.ವಿ.ಹಂಪಿ. ೨೦೦೩

೩೦. ಶಂಕರಪ್ಪ ಎಂ ಕುಂದಗೋಳ : ಕಲಾವಿದ ಡಿ.ವಿ. ಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು ಎಂ.ಫಿಲ್. ಪ್ರ.ಕ.ವಿ.ವಿ.ಹಂಪಿ. ೨೦೦೫

೩೧. ಸಿ.ಡಿ. ಜಟ್ಟೆಣ್ಣವರ : ಕಲಾವಿದ ಡಾ. ಎಂ.ವಿ. ಮಿಣಜಿಗಿಯವರ ಜೀವನ ಮತ್ತು ಕಲಾ ಕೃತಿಗಳು ಎಂ.ಫಿಲ್. ಪ್ರ.ಕ.ವಿ.ವಿ.ಹಂಪಿ. ೨೦೦೫

೩೨. ರವಿ ವಸರಾಮ ನಾಯಕ : ಕಿನ್ನಾಳ ಕಲೆ ಒಂದು ಅಧ್ಯಯನ ಎಂ.ಫಿಲ್. ಪ್ರ.ಕ.ವಿ.ವಿ.ಹಂಪಿ. ೨೦೦೬

೩೩. ಸುಚಿತ್ರಾ ಲಿಂಗದಳ್ಳಿ : ವಿಜಯನಗರ ಭಿತ್ತಿ ಚಿತ್ರಕಲೆ ಎಂ.ಫಿಲ್. ಪ್ರ.ಕ.ವಿ.ವಿ.ಹಂಪಿ. ೨೦೦೬

೩೪. ಶಶಿಕಾಂತ ಕೆ. ಬಸರಿಕಟ್ಟಿ : ಕಲಘಟಗಿಯ ಕಲೆ ಒಂದು ಅಧ್ಯಯನ ಎಂ.ಫಿಲ್. ಪ್ರ.ಕ.ವಿ.ವಿ.ಹಂಪಿ. ೨೦೦೭

೩೫. ಬಿ.ಎಂ. ಪಾಟೀಲ : ನಿಪ್ಪಾಣಿ ವಾಡೆ ಚಿತ್ರಕಲೆ ಒಂದು ಅಧ್ಯಯನ ಎಂ.ಫಿಲ್. ಪ್ರ.ಕ.ವಿ.ವಿ.ಹಂಪಿ. ೨೦೦೭

೩೬. ಉಮೇಶ ಎಸ್. : ಜೈನ ಚಿತ್ರಕಲೆ ಒಂದು ಅಧ್ಯಯನ ಎಂ.ಫಿಲ್. ಪ್ರ.ಕ.ವಿ.ವಿ.ಹಂಪಿ. ೨೦೦೭

೩೭. ಶೈಲಾ ಬರಡೋಲ್ : ಸಂತ ಶುಬ್ಬರಾಯ ಜೀವನ ಮತ್ತು ಕಲಾಕೃತಿಗಳು ಒಂದು ಅಧ್ಯಯನ ಎಂ.ಫಿಲ್. ಪ್ರ.ಕ.ವಿ.ವಿ.ಹಂಪಿ. ೨೦೦೭

ಮಂದಿ ಅಧ್ಯಯನ ನಿರತರಾಗಿದ್ದಾರೆ. ಇದಲ್ಲದೇ ವಿಶ್ವವಿದ್ಯಾಲಯುಗಳ ಡಿಪ್ಲೋಮಾ ಪದವಿ ಅಂತಿಮ ವರ್ಷಕ್ಕೆ ಸಿದ್ಧಪಡಿಸುವ ಕಿರು ಸಂಶೋಧನಾ ಯೋಜನಾ ವರದಿಗಳು ಬಿ.ವಿ.ಎ ಮತ್ತು ಬಿ.ಎಫ್.ಎ ಪದವಿ ಹಾಗೂ ಎಂ.ವಿ.ಎ ಮತ್ತು ಎಂ.ಎಫ್.ಎ ಸ್ನಾತಕೋತ್ತರ ಹಂತದಲ್ಲಿ ಸುಮಾರು ೪೦೦ ಕ್ಕೂ ಹೆಚ್ಚಿನ ಲಘುಶೋಧ ಪ್ರಬಂಧಗಳು ರಚನೆಗೊಂಡಿವೆ. ಪದವಿ ತರಗತಿಗಳಿಗೆ ಅಧ್ಯಯನದ ಭಾಗವಾಗಿ ಕಿರು ಸಂಶೋಧನಾ ಪ್ರಬಂಧಗಳು ರಚನೆಯಾಗಿದ್ದು, ಸಂಶೋಧನಾ ಅಧ್ಯಯನವು ಕಲಾಕ್ಷೇತ್ರದಲ್ಲಿ ಅನಿವಾರ್ಯವಾದ ಅಧ್ಯಯನವಾಗಿ ಬೆಳೆಯುತ್ತಿದೆ. ಹೀಗೆ ಈ ಕ್ಷೇತ್ರದಲ್ಲಿ ಸಂಶೋಧನೆಗಳು ತಿವ್ರವಾಗಿ ಮುನ್ನಡೆಯುತ್ತಲಿದ್ದು, ಭವಿಷ್ಯತ್ತಿನಲ್ಲಿ ಕಲಾಕ್ಷೇತ್ರವು ಸಂಶೋಧನಾತ್ಮಕವಾಗಿಯೂ ಇನ್ನಷ್ಟು ಬಲಗೊಳ್ಳುವ ಆಶಯುವನ್ನು ನೀರಿಕ್ಷಿಸಬಹುದು.

**ಪ್ರಸ್ತುತ ಅಧ್ಯಯನದ ಕುರಿತು ಇಲ್ಲಿಯುವರೆಗೂ ನಡೆದ ಅಧ್ಯಯನಗಳು**

ಡಾ.ಎಂ.ಎಂ.ಕಲಬುರ್ಗಿಯವರು ಐತಿಹ್ಯ ಒಂದನ್ನು ಸಂಗ್ರಹಿಸಿ ವಿವೇಚಿಸಿದ್ದಾರೆ. ಶಿವನು ಪಾರ್ವತಿಗೆ ತನ್ನ ಕಂಬಳಿಯುನ್ನು ಕೊಟ್ಟು ಲೋಕ ಸಂಚಾರಕ್ಕೆ ಹೋಗಿದ್ದ ಶಿವನು. ತಾನೇ ಇಲಿಯಾಗಿ ಬಂದು ಅದನ್ನು ಅಲ್ಲಲ್ಲಿ ಕಡಿದ ಇದರಿಂದ ತಾನು ಗಂಡನ ಕೋಪಕ್ಕೆ ಗುರಿಯಾಗಬೇಕಾಗುವದೆಂದು ಪಾರ್ವತಿ ನಡುಗಿದಳು. ಅಷ್ಟರಲ್ಲಿ ಶಿವ ಸಿಂಪಿಗನ ರೂಪದಲ್ಲಿ ಬರುತ್ತಾನೆ. ಕಂಬಳಿಯುನ್ನು ಮೊದಲಿನಂತೆ ಹೊಲಿದುಕೊಟ್ಟರೆ ಬೇಡಿದುದನ್ನು ಕೊಡುವದಾಗಿ ಸಿಂಪಿಗನಿಗೆ ಪಾರ್ವತಿ ಮಾತು ಕೊಡುತ್ತಾಳೆ. ಕಂಬಳಿಯುನ್ನು ಮೊದಲಿನಂತೆ ಮಾಡಿಕೊಡುತ್ತಾನೆ. ಸಿಂಪಿಗ ಪಾರ್ವತಿಗೆ ಭೋಗಸುಖವನ್ನು ಕೇಳಿದ ಮಾತುಕೊಟ್ಟ ತಪ್ಪಿಗಾಗಿ ಪಾರ್ವತಿ ಅನಿವಾರ್ಯ ಒಪ್ಪಿದಳು. ಸಂಭೋಗ ನಿರತ ಸಿಂಪಿಗ ತನ್ನ ಶಿವರೂಪ ತೋರಿದಾಗ ಪಾರ್ವತಿ ಲಜ್ಜೆಯಿಂದ ತಲೆ ಕೆಳಗೆ ಮಾಡಿದಳಂತೆ ರುಂಡ ಕತ್ತರಿಸಿ ಬಿದ್ದಿತು. ಸಂಭೋಗ ಸಮಯುದ ನಗ್ನ ರೂಪದಲ್ಲಿಯೇ ಮುಂಡ ಉಳಿದುಬಿಟ್ಟಿತು. ಇದೇ ಲಜ್ಜಾಗೌರಿ ಈ ಕಥೆ ಲಜ್ಜಾಗೌರಿ ವಿಗ್ರಹ ರುಂಡ ರಹಿತವಾಗಿರುವುದಕ್ಕೆ ನಗ್ನವಾಗಿರುವುದಕ್ಕೆ ಕಾರಣವನ್ನು ಒದಗಿಸುತ್ತದೆ.[೩೮] ಎಂದು ಹೇಳುತ್ತ ಈ ಶಿಲ್ಪದ ಬಗೆಗೆ ಅಧ್ಯಯನ ಮಾಡಿದ್ದಾರೆ.

ಸ್ಟೆಲ್ಲಾ ಕ್ರಾಮರಿಶರವರು ಲಜ್ಜಾಗೌರಿಯು ಕುರಿತು ಸಾಕಷ್ಟು ಅಧ್ಯಯನ ಮಾಡಿದ್ದಾರೆ. ಇವರು ಬಾದಾಮಿ, ಮಹಾಕೂಟ, ಆಲಂಪುರ ಮುಂತಾದೆಡೆಗಳಲ್ಲಿರುವ ಲಜ್ಜಾಗೌರಿಯ ಶಿಲ್ಪಗಳು ಹೆಚ್ಚಿನಡೆ ರತಿಕಾಲದ ಸ್ತ್ರೀ ಭಂಗಿಯುಲ್ಲಿರುವುದು. ನಮಗೆ ಕಂಡು ಬರುತ್ತದೆ. ಈ ಸ್ತ್ರೀಯುನ್ನು ಉತ್ತಾನಪಾದ ಅದಿತಿ ಎಂದಿದ್ದಾರೆ. ಅಲ್ಲದೆ ಅದರ ಮಸ್ತಕದ ಜಾಗದಲ್ಲಿರುವ ಕಮಲವು

೩೮. ಡಾ. ಎಂ.ಎಂ. ಕಲಬುರ್ಗಿ ಮಾರ್ಗ-೨. ಪುಟ-೩೭೫-೩೭೬

ಭಾರತೀಯ ಪರಂಪರೆಯಲ್ಲಿ ಸೃಷ್ಟಿಯ ಪ್ರತೀಕ ವಾಗಿರುವದರಿಂದ ಅದು ಅವಳ ವ್ಯಕ್ತಿತ್ವದ ಸಂಪೂರ್ಣ ಪ್ರತೀಕ ರೂಪಕವಾಗಿದೆ. ಮತ್ತು ಈಜಿಪ್ಟನಲ್ಲಿಯ ಬೌಬೋ ಎಂಬ ಹೆಸರಿನ ಮಾತೃದೇವತೆಗಳ ಮೂರ್ತಿ ವರ್ಗವನ್ನು ಅವರು ಕಣ್ಣೆದುರಿಗಿಟ್ಟುಕೊಂಡು ಲಜ್ಜಾಗೌರಿಯನ್ನು ಉತ್ತಾನ ಪಾದ ಅದಿತಿಯೊಂದಿಗೆ ಜೋಡಿಸಿ ವಿವರಿಸಿದ್ದಾರೆ.[೩೯]

ಪಿ. ಥಾಮಸ್‌ರವರು ಶಾಕ್ತರ ಕುರಿತು ಪ್ರಸ್ತಾಪಿಸಿದ್ದಾರೆ. ಇವರಲ್ಲಿ ದಕ್ಷಿಣ ಮಾರ್ಗಿ ಮತ್ತು ವಾಮಮಾರ್ಗಿ ಎಂಬೆರಡು ಭಾಗಗಳಿವೆ. ದಕ್ಷಿಣ ಮಾರ್ಗಿಯವರು ಬಲಗೈ ಪೂಜಕರು ಮತ್ತು ಬಹಿರಂಗ ಪೂಜಕರು ಎಂದೂ, ವಾಮ ಮಾರ್ಗಿಗಳಿಗೆ ಎಡಗೈ ಪೂಜಕರು ಗುಪ್ತ ಪೂಜಕರು ಎಂದೂ ಕರೆಯುತ್ತಾರೆ ಇವರಲ್ಲಿ ಚಕ್ರಪೂಜೆ ಪಂಚ'ಮ'ಕಾರದ ಅನುಸರಣೆ ಇವೆ. ಇವರು ಬೆತ್ತಲೆ ಹೆಣ್ಣನ್ನು (ಲಜ್ಜಾಗೌರಿ-ಬೆತ್ತಲೆಗೌರಿ) ಪೂಜಿಸುವರು.[೪೦] ಎಂಬ ಮಹತ್ವದ ವಿವರವನ್ನು ನೀಡುತ್ತಾ ಲಜ್ಜಾಗೌರಿಯ ಶಿಲ್ಪದ ಆಚರಣೆಯ ಪ್ರಸ್ತಾಪ ಮಾಡಿದ್ದಾರೆ.

ಹೋಳಿ ಜೋಕುಮಾರರ ಹಬ್ಬಗಳಲ್ಲಿ ಅಶ್ಲೀಲ ಹಾಡುಗಳನ್ನು ಹೆಣ್ಣು ಗಂಡು ಇಬ್ಬರೂ ಹೇಳುವ ಕುರಿತು ಬೆತ್ತಲೆ ಗೌರಿ ಯೋನಿ ಪೂಜೆಯ ಕುರಿತು ಪಂಚ'ಮ' ಕಾರದಲ್ಲಿಯ ಸಂಭೋಗದ ಮಹತ್ವವನ್ನು ನಮ್ಮ ತತ್ವಜ್ಞಾನ ಮತ್ತು ಸಮಾಜ ಗ್ರಹಿಸಿದ ರೀತಿಗೆ ಆಧಾರವಾಗಿಟ್ಟುಕೊಂಡು ಚರ್ಚಿಸಿದ್ದಾರೆ.[೪೧]

ಜಾನ್ ಫ್ಲೀಟರು ಮೊದಲ ಸಲ ಮಹಾಕೂಟದಲ್ಲಿ ಲಜ್ಜಾಗೌರಿ ಶಿಲ್ಪವನ್ನು ಕಂಡಾಗ ಶಿರೋಭಾಗವಿಲ್ಲದ ಅಶ್ಲೀಲ ಶಿಲ್ಪವೆಂದು ಕರೆಯುತ್ತಾರೆ. ನಗ್ನ ಸ್ತ್ರೀ ಅಂಗಾತವಾಗಿ ಮಲಗಿ ತನ್ನ ಎರಡೂ ಕಾಲುಗಳನ್ನು ಮಡಚಿ ಯೋನಿಯ ಕಾಣಿಸುವಂತೆ ಮೇಲಕ್ಕೆಳೆದುಕೊಂಡು ತೊಡೆಗಳನ್ನು ಅಗಲಿಸಿದ ರೀತಿಯಲ್ಲಿ ಈ ಶಿಲ್ಪದ ರಚನೆ ಇರುತ್ತದೆ[೪೨] ಎಂದು ಶಿಲ್ಪದ ಬಾಹ್ಯ ಆಕಾರದ ಅಂಗಾಂಗಳ ಕುರಿತು ವಿವರಣೆ ನೀಡಿದ್ದಾರೆ.

ಕ್ಯಾಂಪಬೆಲ್ ಎಂಬುವರು ಅವರು ಮೊದಲ ಬಾರಿ ಮಹಾಕೂಟದ ಲಜ್ಜಾಗೌರಿಯನ್ನು ಕಂಡಾಗ ಅದು ಅಂಗಾತವಾಗಿ ಮಲಗಿದ ಸ್ಥಿತಿಯಲ್ಲಿಯೇ ಇದ್ದಿತೆಂದು ಉಲ್ಲೇಖಿಸುತ್ತ ಅದನ್ನು

---

೩೯. ಡಾ.ವಿಠಲರಾವ್ ಗಾಯಕ್ವಾಡ್ : ಲಜ್ಜಾಗೌರಿ ಪುಟ-೨೦೮-೨೦೯

೪೦. ಎಸ್.ಎಸ್. ಹಿರೇಮಠ : ಕರ್ನಾಟಕ ದಲಿತ ಪರಂಪರೆ ಭಾಗ-೨ ಜಾತ್ರೆಗಳು ಪುಟ-೨೭೩

೪೧. ಎಸ್.ಎಸ್. ಹಿರೇಮಠ : ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ ಭಾಗ-೨ ಜಾತ್ರೆಗಳು ಪುಟ-೩೪೮

೪೨. ಡಾ. ಶಿಲಾಕಾಂತ ಪತ್ತಾರ : ಬಾದಾಮಿ ಸಾಂಸ್ಕೃತಿಕ ಅಧ್ಯಯನ. ಪುಟ-೧೬೯-೧೭೦

(ಈ ಲಜ್ಜಾಗೌರಿ ಶಿಲ್ಪಕ್ಕೆ) ಶಯನ ಶಿಲ್ಪವೆಂದು ಕರೆದು[೪೩] ವಿವೇಚಿಸುತ್ತಾರೆ.

ಡಾ.ಜ್ಯೋತ್ಸಾಕಾಮತ್[೪೪] ಅವರು ಲಜ್ಜಾಗೌರಿ ಶಿಲ್ಪಗಳು ಸಿಗುವ ಸ್ಥಳಗಳನ್ನು ಗುರುತಿಸಿದ್ದು ಅವುಗಳಲ್ಲಿ ಪ್ರಮುಖವಾಗಿ ಹಲವು ನದಿಕೊಳ್ಳ, ನಿರ್ಜನ ಕಣಿವೆಗಳಲ್ಲಿ ಪ್ರಸಿದ್ಧ ಶಕ್ತಿದೇವತೆಯ ಉಪಾಸನಾ ಕೇಂದ್ರಗಳಲ್ಲಿ ಇರುವುದನ್ನು ತಿಳಿಸುತ್ತಾರೆ. ಉದಾ: ಮಲಪ್ರಭೆಯ ಮಾಕೋಟೇಶ್ವರ (ಮಹಾಕೂಟೇಶ್ವರ) ಇಂತಹ ಇನ್ನು ಬೇರೆ ಬೇರೆ ಸ್ಥಳಗಳಲ್ಲಿ ಲಜ್ಜಾಗೌರಿ ಶಿಲ್ಪಗಳಿರುವುದನ್ನು ಕುರಿತು ಚರ್ಚಿಸಿದ್ದಾರೆ.

ಡಾ. ಶಿಲಾಕಾಂತ. ಪತ್ತಾರವರು ಲಜ್ಜಾಗೌರಿ ಶಿಲ್ಪದ ಇನ್ನೊಂದು ವೈಶಿಷ್ಟವೆಂದರೆ ಲಜ್ಜಾಗೌರಿ ಶಿಲ್ಪದ ಕುರಿತು ಮಾಹಿತಿ ನೀಡಿದ್ದಾರೆ. ಲಜ್ಜಾಗೌರಿ ಶಿಲ್ಪಕ್ಕೆ ಸಾರ್ವಜನಿಕ ಪೂಜೆಗಳು ಸಲ್ಲುವುದಿಲ್ಲ. ಪೂಜಾ ವಿಧಾನವು ರಹಸ್ಯವಾದುದು. ಈ ಸಂತಾನ ನೀಡುವ ದೇವಿ ಶಿಲ್ಪದ ಯೋನಿಗೆ ಬೆಣ್ಣೆಸವರಿ ಅದನ್ನು ನೆಕ್ಕಿ ಪ್ರಸಾದವೆಂದು. ಸ್ತ್ರೀ ಸ್ವೀಕರಿಸುತ್ತಾಳೆ. ಸಿದ್ಧನಕೊಳ್ಳದ ಪರಿಸರದಲ್ಲಿ ಈಗಲೂ ಈ ಬಗೆಯ ಆಚರಣೆ ರೂಢಿಯಲ್ಲಿದೆ[೪೫] ಎಂದು ಚರ್ಚಿಸಿದ್ದಾರೆ.

ಡಾ.ಸಿದ್ದಲಿಂಗಯ್ಯನವರು[೪೬] ಸಿಂಧೂ ಸಂಸ್ಕೃತಿಯಲ್ಲಿ ಮಾತೃದೇವತೆಯನ್ನು ಭೂಮಿಯ ತಾಯಿಯೆಂದೂ ಮಾನವರ ಮಾತೆಯೆಂದೂ ದೇವತೆಗಳ ತಾಯಿ ಎಂದೂ ಅರಣ್ಯ ಪ್ರಾಣಿ ಧಾನ್ಯ ಪಕ್ಷಿ ಇವುಗಳ ಮಾತೃವೆಂದೂ ಪೂಜಿಸಲಾಗಿದೆ, ಸ್ತನ, ಗರ್ಭ, ಯೋನಿ ಇವುಗಳನ್ನು ಮಾತೃ ದೇವತೆಯ ಸಂಕೇತಗಳೆಂದೂ ಅವರು ಭಾವಿಸಿದ್ದರು. ಈ ಮೂರು ಅಂಗಗಳು ಮೂರು ಮುಖ್ಯ ಚಟುವಟಿಕೆಗಳನ್ನು ಮಾಡುತ್ತವೆ. ಅವು ಪಾಲನೆ ಧಾರಣೆ ಮತ್ತು ಸೃಷ್ಟಿ ಸಿಂಧೂ ಸಂಸ್ಕೃತಿಯಲ್ಲಿ ದೊರೆತಿರುವ ಉಗ್ರಾಕಾರದ ಶಿಲ್ಪಗಳನ್ನು ಮಾತೃದೇವತೆಯ ಸೃಷ್ಟಿಯ ಯೋನಿ ಎಂದು ಭಾವಿಸಲಾಗಿದೆ.

ಡಾ.ಎಂ.ಚಿದಾನಂದಮೂರ್ತಿ[೪೭] ಅವರು ಲಜ್ಜಾಗೌರಿಯ ಬಗ್ಗೆ ವಿವರಿಸಿದ್ದಾರೆ. ಉತ್ತರ ಕರ್ನಾಟಕದಲ್ಲಿ ಸುತ್ತ ಮುತ್ತ ಹಬ್ಬಿರುವ ರಹಸ್ಯಾತ್ಮಕ ನಂಬಿಕೆಗಳ ಬಗ್ಗೆ ಗುರುತಿಸಿದ್ದು, ಇಲ್ಲಿ ಪ್ರತ್ಯೇಕವಾಗಿ ಬಾದಾಮಿಯ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿ ಇರುವ ಲಜ್ಜಾಗೌರಿಯ ವಿಗ್ರಹದ

---

೪೩. ಡಾ. ಶಿಲಾಕಾಂತ ಪತ್ತಾರ : ಬಾದಾಮಿ ಸಾಂಸ್ಕೃತಿಕ ಅಧ್ಯಯನ, ಪುಟ-೧೭೦

೪೪. ಡಾ. ಜ್ಯೋತ್ಸ್ನಾಕಾಮತ್ : ಮಹಿಳೆ ಒಂದು ಅಧ್ಯಯನ, ಪುಟ-೯-೧೦

೪೫. ಡಾ. ಶಿಲಾಕಾಂತ ಪತ್ತಾರ : ಬಾದಾಮಿ ಸಾಂಸ್ಕೃತಿಕ ಅಧ್ಯಯನ ಪುಟ ೧೬೯-೧೭೦.

೪೬. ಮೊಗಳ್ಳಿ ಗಣೇಶ : ದಲಿತ ಚಿಂತನೆ ಪುಟ-೧೦೦

೪೭. ಡಾ. ಎಂ. ಚಿದಾನಂದಮೂರ್ತಿ : ಜನ-ಜನಪದ-ಜಾನಪದ-ಪುಟ-೪೧೫-೪೧೬

ಬಗ್ಗೆ ವಿವರಣೆ ನೀಡಿದ್ದು ಮತ್ತು ಇಂತಹ ವಿಗ್ರಹಗಳು ಸಿಗುವ ಸ್ಥಳಗಳನ್ನು ಪ್ರಮುಖವಾಗಿ ಗುರುತಿಸಿ ಅಧ್ಯಯನ ಮಾಡಿದ್ದಾರೆ.

ಎಸ್.ಆರ್. ಶಾಸ್ತ್ರೀಯವರು ಅನುವಾದ ಮಾಡಿದ ದೇವಾಲಯುಗಳು ಮತ್ತು ಲೈಂಗಿಕ ಶಿಲ್ಪ ಎಂಬ ಪುಸ್ತಕದಲ್ಲಿ ಆಂದ್ರ ಪ್ರದೇಶದ ಕರ್ನೂಲು ಜಿಲ್ಲೆಯ ಆಲಂಪುರ ಪುಣ್ಯಕ್ಷೇತ್ರದ ಕುರಿತು ಇಲ್ಲಿರುವ ದೇವತೆಗೆ ಯೋನಿ ಪೂಜೆಯನ್ನು ಮಾಡುವ ಕುರಿತು, ಇಲ್ಲಿ ವಿಶೇಷವಾಗಿ ಕಲಾವಿದರು ಈಗಲೂ ಸಹ ಲಜ್ಜಾಗೌರಿಯ ವಿಗ್ರಹಗಳನ್ನು ಕಲ್ಲಿನಲ್ಲಿ ರಚಿಸುವ ಕುರಿತು ಈ ಭೂ ಪೂಜೆಯನ್ನು ಮಾಡುವವರಿಗೆ ಅಷ್ಟಭಾಗ್ಯಗಳು ಅನಾಯಾಸವಾಗಿ ಲಭಿಸುತ್ತವೆ.[೪೮] ಎಂಬ ನಂಬಿಕೆಯನ್ನು ವಿವಿರವಾಗಿ ವಿವೇಚಿಸಿದ್ದಾರೆ. ಇಲ್ಲಿ ಸ್ತ್ರೀ ಪುರುಷರ ಗೌಪ್ಯಾಂಗಗಳಿಗೆ ಆರಾಧನೆ ನಡೆಯುವ ಅವುಗಳ ವಿಷಯದಲ್ಲಿ ದೇವತಾ ಭಾವವನ್ನು ಮುಗ್ಧ ಜನರು ಹೊಂದಿರುವುದರ ಬಗೆಗೆ ಇವರು ಚರ್ಚಿಸಿದ್ದಾರೆ.

ಡಾ.ಅ.ಸುಂದರ ಅವರು ಉತ್ತರ ಕರ್ನಾಟಕದಲ್ಲಿಯ ಕೆಲವು ಪ್ರಾಚೀನ ತಾಂತ್ರಿಕ ಮೂರ್ತಿಗಳ ಬಗ್ಗೆ ಹೇಳುತ್ತ ಲಜ್ಜಾಗೌರಿಯ ಮೂರ್ತಿಗಳ ಕಾಲಮಾನ ಮತ್ತು ಪರಿಸರದ ಕುರಿತು ಈ ವಿಭಾಗದಲ್ಲಿ ದೊರೆತಿರುವ ಶಿಲ್ಪಗಳ ಕುರಿತು ವಿವರಿಸಿದ್ದಾರೆ. ಹೊಸ ಮಹಾಕೂಟ, ಸನ್ನತಿ, ಬಳ್ಳಿಗಾವೆ, ಜಾಲಿಹಾಳ, ಸಿದ್ದನಕೊಳ್ಳ, ಮುಂತಾದ ಸ್ಥಳಗಳನ್ನು ಮತ್ತು ಅವುಗಳ ಸ್ಥಿತಿ-ಗತಿಯನ್ನು ವಿವರಿಸಿದ್ದಾರೆ. ವಿಶೇಷವಾಗಿ ರೂಡಿಯಲ್ಲಿ ಸ್ಥಳಿಕರು, ಲಜ್ಜಾಗೌರಿ, ಕಮಲಮ್ಮ ಮುಂತಾದ ಹೆಸರುಗಳಿಂದ ಕರೆಯುವುದನ್ನು ಉಲ್ಲೇಖಿಸುತ್ತಾರೆ.[೪೯] ಸನ್ನತಿಯಲ್ಲಿ ದೊರೆತ ಮೂರು ಸಣ್ಣ ಮೂರ್ತಿಗಳ ಸುಟ್ಟ ಮಣ್ಣಿನವು, ಉಳಿದೆಲ್ಲವೂ ಕಲ್ಲಿನದಾಗಿದ್ದು ದೊಡ್ಡ ಪ್ರಮಾಣದಲ್ಲಿವೆ. ಕಲ್ಲಿನ ಮೂರ್ತಿಗಳಲ್ಲಿ ನಾಗರಾಳ, ಬಳ್ಳಿಗಾವೆ ಕರಿಕಲ್ಲಿನದು ಉಳಿದವು ನಸುಗೆಂಪು ಮರಳು ಕಲ್ಲಿನವು. ಸಿದ್ದನಕೊಳ್ಳದಲ್ಲಿರುವುದು ಮಾತ್ರ ಗವಿಯೊಳಗೆ ನೆಲದ ಬಂಡೆಯ ಮೇಲೆ ಕೆತ್ತಲಾಗಿದೆ. ಹೀಗೆ ಉತ್ತರ ಕರ್ನಾಟಕದಲ್ಲಿ ದೊರೆತಿರುವ ಲಜ್ಜಾಗೌರಿ ಶಿಲ್ಪಗಳ ಬಗ್ಗೆ ವಿವರಿಸಿದ್ದಾರೆ.

ಡಾ.ಶೈಲಜಾ ಹಿರೇಮಠರವರು ಮಾತೃಪ್ರಧಾನ ಪರಿಕಲ್ಪನೆ ಕುರಿತು ಬರೆಯುತ್ತ ಲಜ್ಜಾಗೌರಿ ಉಪಭೋಗದ ಬಗ್ಗೆ ವಿವರಿಸಿದ್ದಾರೆ. ಹೆಣ್ಣು ದೈವಗಳಲ್ಲಿ ಲಜ್ಜಾಗೌರಿಯ ಕುರಿತು ಸಾಂದರ್ಬಿಕ

೪೮. ಎಸ್.ಆರ್. ಶಾಸ್ತ್ರೀ : ದೇವಾಲಯುಗಳು ಮತ್ತು ಲೈಂಗಿಕ ಶಿಲ್ಪ ಪುಟ-೯೨.
೪೯. ಡಾ. ಎಂ.ಚಿದಾನಂದ ಮೂರ್ತಿ(ಸಂ) : ಶಂಭಾ ಜೋಶಿ. ಅಭಿನಂದನ ಗ್ರಂಥ ಅಧ್ಯಯನ ಪುಟ-೩೮೫-೩೮೭.

ಚರ್ಚೆಯನ್ನು ಬೆಳಸಲಾಗಿದೆ. ಇಲ್ಲಿ ಪ್ರಮುಖವಾಗಿ ಲಜ್ಜಾಗೌರಿಯ ಸ್ಥಿತಿ-ಗತಿ ಮೂಲಹೆಸರು ಇದರ ಅರ್ಥವನ್ನು ಇಲ್ಲಿ ವಿವರಿಸಲಾಗಿದ್ದು, ಜನ ಸಾಮಾನ್ಯರಲ್ಲಿ ಪ್ರಚಲಿತದಲ್ಲಿರುವ ಲಜ್ಜಾಗೌರಿಯನ್ನು ವಿದ್ವತ್ ವಲಯವು ಲಜ್ಜಾಗೌರಿ ಎಂದು ಕರೆಯುತ್ತದೆ. ಸಂಸ್ಕೃತದಲ್ಲಿ ಲಂಜಾ ಎಂದರೆ ನಿರ್ಲಜ್ಜ ಸ್ತ್ರೀ, ವೇಶ್ಯೆ, ಲಕ್ಷ್ಮೀ ಎಂಬ ಹೀಗೆ ನಾನಾ ಅರ್ಥಗಳಿವೆ. ಬಳಕೆ ಭಾಷೆಯಲ್ಲಿ ಲಜ್ಜೆಗೆ ಬೇರೆಯದೇ ಅರ್ಥವಿದೆ. ಆಡುನುಡಿಯಲ್ಲಿ "ಲಜ್ಜೆ" ಎಂದರೆ ನಾಚಿಕೆಯುಳ್ಳವಳು, ಲಜ್ಜೆಯನ್ನು ಕಾಪಾಡುವವಳು ಹೀಗೆ ಮುಂತಾದ ಅರ್ಥಗಳನ್ನು ವಿವರಿಸಿದ್ದಾರೆ.[೫೦] ಹೀಗೆ ಲಜ್ಜಾಗೌರಿಯ ಧಾರ್ಮಿಕ ಕಥೆಗಳು, ಮಕ್ಕಳಾಗದವರು ಈ ದೇವತೆಗಳಿಗೆ ಪೂಜಿಸುವ ಕುರಿತು, ಲಜ್ಜಾ ಗೌರಿಯ ಪ್ರತಿಮೆ ನೀಡುವ ಕುರಿತು ವಾಸ್ತವ ಜೀವನದಲ್ಲಿ ಹೆಣ್ಣನ್ನು ಪರಿಗಣಿಸಿದ ರೀತಿಗೂ, ಭೋಗ ಮತ್ತು ಉಪಭೋಗದ ನೆಲೆಯನ್ನು ಕುರಿತು. ಮಾತೃಪ್ರಧಾನ ಪರಿಕಲ್ಪನೆಯಲ್ಲಿ ಲಜ್ಜಾಗೌರಿಯ ಉಪಭೋಗದ ಬಗ್ಗೆ ವಿಶೇಷವಾಗಿ ವಿವರಿಸಿದ್ದಾರೆ.

ಪ್ರಜಾವಾಣಿಯಲ್ಲಿ ೨೦-೦೮-೨೦೦೭. ಸಿದ್ದಲಿಂಗಪ್ಪ ಬೀಳಗಿ,[೫೧] ಇವರು ಲಜ್ಜಾಗೌರಿ ಪೂಜೆ ಕೊಂಬೆಗೆ ಕೈಮುಗಿದರೂ ನಂಬಿಕೆ ಇರಬೇಕೆಂಬ ತತ್ವದಿ ಬದಕುವ ನಮ್ಮ ಸಮಾಜದಲ್ಲಿ ನಂಬಿಕೆಗಳಿಗೇನೂ ಬರವಿಲ್ಲ ಮಕ್ಕಳಾಗದೇ ಇರುವವರು ಸಂತಾನ ಪ್ರಾಪ್ತಿಗಾಗಿ ದೇವರಿಗೆ ತೊಟ್ಟಿಲು ಕಟ್ಟುವುದು, ಹೀಗೆ ಮಾಡಿದರೆ ಮಕ್ಕಳಾಗುತ್ತವೆ ಎಂಬ ನಂಬಿಕೆ ಇರುವದನ್ನು ಬಾಗಲಕೋಟ ಜಿಲ್ಲೆಯ ಬೀಳಗಿಯಲ್ಲಿನ ಸಿದ್ದೇಶ್ವರ ದೇವಸ್ಥಾನದ ಆವರಣದಲ್ಲಿರುವ ಲಜ್ಜಾಗೌರಿ ಮೂರ್ತಿಗೆ ಹರಕೆ ಹೊತ್ತರೆ ಮಕ್ಕಳಾಗುತ್ತವೆ.

ನಮ್ಮ ಭಾರತೀಯರಲ್ಲಿ ಅನೇಕ ರೀತಿಯ ಸಂಪ್ರದಾಯಗಳಿದ್ದವು ಅವುಗಳಲ್ಲಿ ಅಂಗವನ್ನು ಪೂಜಿಸುವ, ಆರಾಧಿಸುವ, ಧ್ಯಾನಿಸುವ ಸಂಪ್ರದಾಯ ಸೃಷ್ಟಿಸಿಕೊಂಡಿದ್ದು ಶಾಕ್ತ ಹಾಗು ತಾಂತ್ರಿಕ ಪಂತದವರಿಗೆ ಶಕ್ತಿ ಆರಾಧನೆಯೇ ಸರ್ವಶ್ರೇಷ್ಠವಾಗಿತ್ತು. ಎಲ್ಲಿ ಹೆಣ್ಣಿಗೆ ಪ್ರಾದಾನ್ಯ ವಿದೆಯೋ ಅಲ್ಲಿ ತಾಂತ್ರಿಕತೆಯ ಪ್ರಭಾವ ವಿದೆಯನ್ನಬಹುದು. ಲಜ್ಜಾಗೌರಿ ಕೂಡಾ ತಾಂತ್ರಿಕ ದೇವತೆಗಳ ಸಾಲಿನಲ್ಲಿ ಕಂಡು ಬರುವ ಒಂದು ರೂಪವಾಗಿದೆ. ಬಳ್ಳಿಗಾವಿಯ ಶಿಲ್ಪವನ್ನು ಮಕ್ಕಳಾಗವರು ಚಿಕ್ಕ ಮಕ್ಕಳ ಅಂಗಿಯನ್ನು ತೊಡಸಿ ಪೂಜಿಸುವ ಪರಂಪರೆಯನ್ನು ನಾವು ಇಲ್ಲಿ ಕಾಣಬಹುದು. ಸಂತಾನ ಬಯಸುತ್ತಿರುವ ಹೆಣ್ಣುಮಕ್ಕಳು ಈ ಲಜ್ಜಾಗೌರಿ ಶಿಲ್ಪವನ್ನು ಪೂಜಿಸುತ್ತಾರೆ.

---

೫೦. ಡಾ.ಶೈಲಜಾ ಹಿರೇಮಠ : ಬೆಳ್ಳಿಬೆಳಕು ಮಾಲೆ ಪ್ರಾತಿನಿಧಿಕ ಸಂಕಲನ, ಜಾನಪದ ಲೇಖನಗಳು. ಪುಟ - ೧೫೫-೧೫೮.

೫೧. ಸಿದ್ದಲಿಂಗಪ್ಪ ಬೀಳಗಿ : ಪ್ರಜಾವಾಣಿ, ಪುಟ.-೯, ೨೦-೦೮-೨೦೦೭.

ಬಳ್ಳಿಗಾವಿಯಲ್ಲಿರುವ ಲಜ್ಜಾಗೌರಿ ಶಿಲ್ಪವನ್ನು ಸೂಕ್ಷ್ಮವಾಗಿ ಗಮನಿಸಿದರೆ ಇದು ೫-೬ನೇ ಶತಮಾನದ ಶಿಲ್ಪವೆಂದು ವಿನಾಯಕ ಎಂ.ಶೆಟ್ಟಿ ಅಭಿಪ್ರಾಯ ಪಡುತ್ತಾರೆ.[೫೨]

ಡಾ. ಸುಭಾಸ. ವ್ಯೆ. ಭೋಗೆರ ಇವರು ತಮ್ಮ ಪಿ.ಹೆಚ್‌ಡಿ. ಮಹಾ ಪ್ರಬಂಧದಲ್ಲಿ ಬನಶಂಕರಿ ಜಾನಪದೀಯ ಅಧ್ಯಯನದ ಬಗ್ಗೆ ಮತ್ತು ಲಜ್ಜಾಗೌರಿ ಶಿಲ್ಪಗಳ ಬಗ್ಗೆ ಎರಡು ಜಾನಪದ ಕತೆಗಳನ್ನು ಬಳಸಿಕೊಂಡಿದ್ದಾರೆ.[೫೩]

---

೫೨. ವಿನಾಯಕ ಎಂ. ಶೆಟ್ಟಿ : ಶಿಕಾರಿಪುರದ ಸಿರಿ. ಪುಟ-೮-೯.

೫೩. ಡಾ. ಸುಭಾಸ. ವ್ಯೆ. ಭೋಗೆರಿ : ಬನಶಂಕರಿ ಜಾನಪದೀಯ ಅಧ್ಯಯನ. ಪಿಹೆಚ್.ಡಿ ಮಹಾ ಪ್ರಬಂಧ. ಪುಟ-೨೪-೨೫.



ವಿಲ್ಲಂಡರ್ಫ್‌ನಲ್ಲಿ ದೊರೆತಿರುವ ಮಾತೃದೇವತೆ ಶಿಲ್ಪ

ಅಧ್ಯಾಯ : ಎರಡು

## ಮಾತೃದೇವತಾ ಆರಾಧನೆ ಮತ್ತು ಲಜ್ಜಾಗೌರಿ ಶಿಲ್ಪಗಳು ಬೆಳವಣಿಗೆಯ ನೆಲೆ-ಹಿನ್ನೆಲೆ

ಮಾನವನು ಬೇಟೆಯಾ ಡಿ ಜೀವನ ನಡೆಸುತ್ತಿದ್ದ ಕಾಲದಿಂದ ಇಂದಿನವರೆಗೂ ಹಲವಾರು ರೀತಿಯ ಬೆಳವಣಿಗೆಗಳು ನಡೆದು ಬಂದಿವೆ. ಜೀವನ ರೀತಿ ಮಾರ್ಪಾಡುಗೊಂಡಿದೆ ಬದುಕಿನ ನೆಲೆಯೂ ವಿಸ್ತಾರಗೊಂಡಿದೆ. ಹಂತ ಹಂತವಾಗಿ ಬೆಳೆದು ಬಂದ ಜೀವನ ವಿಧಾನ ಸಮಾಜ ವಿಜ್ಞಾನಾಸಕ್ತರಲ್ಲಿ ವಿಸ್ಮಯಕ್ಕೆ ಕಾರಣವಾಗಿದೆ. ಕಾಡಿನಲ್ಲಿ ಕ್ರೂರ ಮೃಗಗಳನ್ನು ಬೇಟೆಯಾಡಿ ಜೀವನ ನಡೆಸುತ್ತಿದ್ದ ಮಾನವ ಬೆಂಕಿಯ ಆವಿಷ್ಕಾರದಿಂದ ಬೇಟೆಯಾಡುವ ಸಂಸ್ಕೃತಿಯಿಂದ ನೆಲೆನಿಲ್ಲುವ ಸಂಸ್ಕೃತಿಯತ್ತ ಕೊಂಡೊಯಿತು. ಇದು ಮುಂದಿನ ಜೀವನ ಶೈಲಿಯನ್ನು ಬದಲಾಯಿಸಲು ಕೂಡಾ ಕಾರಣವಾಯಿತು. ಬೆಂಕಿ, ನೀರು, ಗಾಳಿ, ಭೂಮಿ ಹಾಗೂ ಆಕಾಶ ಇವುಗಳನ್ನು ದೇವರೆಂದು ನಂಬಿದ. ಇವುಗಳನ್ನು ತನಗೆ ತಿಳಿದ ರೀತಿಯಲ್ಲಿ ಪೂಜಿಸಲು ಪ್ರಾರಂಭಿಸಿದ. ಅಲ್ಲಿಗೆ ತೃಪ್ತನಾಗದೆ ಇನ್ನೂ ಮುಂದುವರಿದು ನೋಡಿದಾಗ ಆತನಿಗೆ ಕಂಡಿದ್ದು ಪುನರುತ್ಪನ್ನ ಕ್ರಿಯೆ ಹೆಣ್ಣು ಎಂಬುದು ಎರಡು ಲಿಂಗ ಪ್ರಭೇದಗಳು ಇವುಗಳಲ್ಲಿ ಹೆಣ್ಣು ಸೃಷ್ಟಿಕಾರಣವಾಗಿರುವುದರಿಂದ ಇದೇ ಹೆಣ್ಣು ಎಲ್ಲಾ ರೀತಿಯ ದೇವ ನಡೆಗೆ ಕಾರಣ ಎಂಬುದು

ಜನರ ನಂಬಿಕೆಗೆ ಕಂಡುಬಂದುದು ಮಾತೃ ದೇವತೆಯ ಆರಾಧನೆಗೆ ಪ್ರಾರಂಭವಾಯಿತೆನ್ನಬಹುದು.

ಮಾತೃದೇವತಾ ಆರಾಧನೆಯು ಮನುಷ್ಯನು ತನ್ನನ್ನು ತಾನು ಅರಿಯಲು ತನ್ನ ಸೃಷ್ಟಿಯ ಕಾರಣವನ್ನು ಕಂಡುಕೊಳ್ಳಲು ಸಹಾಯಕವಾದ ಒಂದು ಮಹತ್ವದ ಹೆಜ್ಜೆಯಾಯಿತು. ಆದುದರಿಂದಲೇ ಜಗತ್ತಿನ ಅತ್ಯಂತ ಮೊದಲ ಶಿಲ್ಪ ಮತ್ತು ಚಿತ್ರಗಳು ಮಾತೃದೇವತೆಯ ಕುರಿತೇ ಇವೆ. ಇವುಗಳು ಹೆಚ್ಚುಪಾಲು ಬಹು ಸೂಕ್ಷ್ಮವಾಗಿವೆ. ಅಗತ್ಯದ ಅಂಶಗಳನ್ನಷ್ಟೇ ಕೂತುಹಲದ ಅಂಶಗಳನ್ನು ಹೊರಹಾಕುವ ಚಿತ್ರಗಳನ್ನಷ್ಟೇ ಆತ ಇಲ್ಲಿ ರಚಿಸಿದ್ದಾನೆ. ಕೇವಲ ಸ್ತನವನ್ನು ಯೋನಿ ಭಾಗಗಳನ್ನು ದೊಡ್ಡದಾಗಿ ಉಳಿದ ಭಾಗಗಳನ್ನು ತೀರಾ ಅಸ್ಪಷ್ಟವಾಗಿ ಕೆತ್ತಿ ಮತ್ತು ಚಿತ್ರಿಸಿ ತನ್ನ ಉದ್ದೇಶವನ್ನು ಸಾರಿದ್ದಾನೆ. ಇತರ ಚಿತ್ರಗಳಾದ ಬೇಟೆಯ ಕುರಿತಾದ ಚಿತ್ರಗಳಿಗೆ ಹೋಲಿಸಿದರೆ ಈ ಚಿತ್ರಗಳು (ಮಾತೃದೇವತೆಯ ಚಿತ್ರಗಳು/ಶಿಲ್ಪಗಳು) ತೀರಾ ಒರಟಾದ ರೀತಿಯಲ್ಲಿ ಚಿತ್ರಿಸಲ್ಪಟ್ಟಿದೆ. ಇದು ಹೆಚ್ಚಾಗಿ ಸಂಜ್ಞಾತ್ಮಕವಾಗಿವೆ ಅಥವಾ ಸೂಚ್ಯವಾಗಿವೆ. ಇವು ಧಾರ್ಮಿಕ ಸಂಕೇತಗಳನ್ನು ಸೂಚಿಸುವುದಾಗಿದೆ ಎಂದು ಸಮಾಜ ಶಾಸ್ತ್ರಜ್ಞರು ವಿಶ್ಲೇಷಿಸಿದ್ದಾರೆ.

ಈ ರೀತಿಯ ಚಿತ್ರಗಳನ್ನು ಮನುಷ್ಯ ತಾನು ಬದುಕಲು ಪ್ರಾರಂಭಿಸಿದ ದಿನಗಳಿಂದಲೇ ಚಿತ್ರಿಸಲು ಪ್ರಾರಂಭಿಸಿದ ಎನ್ನಿಸುತ್ತದೆ.[೧] ಮಾನವ ಸಂಸ್ಕೃತಿಯಲ್ಲಿ ಧಾರ್ಮಿಕ ಸಂಕೇತಗಳು, ಮಾನವನಷ್ಟೇ ಹಳೆಯದೆಂದರೆ ತಪ್ಪಾಗಲಾರದು. ಸ್ವಭಾವತ ಸಾಮಾಜಿಕನಾಗಿರುವ ಮಾನವನಿಗೆ ತನ್ನ ತೀವ್ರ ಅನುಭವಗಳನ್ನು ಜನರಿಗೋಸ್ಕರ ಕೇವಲ ಪ್ರಜ್ಞಾಗಮ್ಯವಾದ ಅನೇಕ ಅನುಭವಗಳನ್ನು ದೈನಂದಿನ ಭಾಷಿಕ ಸಂಜ್ಞೆಗಳ ಮೂಲಕ ಅಭಿವ್ಯಕ್ತಿಗೊಳಿಸಲು ಪ್ರಯತ್ನಿಸುತ್ತಾನೆ. ಈ ಸಂದರ್ಭದಲ್ಲಿ ವಸ್ತುಗಳ ಸಜ್ಞಾರ್ಥಗಳು ಗೌಣವಾಗಿ ಸಂಕೇತಿಕಾರ್ಥಗಳು ಪ್ರಾದಾನ್ಯತೆಯನ್ನು ಪಡೆಯುತ್ತವೆ. ಮಾನವ ಸಂಸ್ಕೃತಿಯಲ್ಲಿ ಕಂಡು ಬರುವಂತಹ ಧಾರ್ಮಿಕ ಸಂಕೇತಗಳು ಮಾತೃದೇವತೆ ಪರಿಕಲ್ಪನೆಯಲ್ಲಿ ಅತ್ಯಂತ ಪ್ರಮುಖವಾದುದು.

ಸೃಷ್ಟಿಗೆ ಸ್ತ್ರೀಯು ಪ್ರಮುಖ ಕಾರಣಳಾಗಿರುತ್ತಾಳೆ ಎಂಬುದು ಎಲ್ಲರೂ ಕಂಡುಕೊಂಡ ಅಂಶ. ಆದರೆ ಪುರುಷನೂ ಇಲ್ಲಿ ಕಾರಣವಾಗಿದ್ದಾನೆ. ಆದರೆ ಆತನ ಪಾತ್ರ ನಿಕೃಷ್ಟವಾಗಿತ್ತು ಎಂಬುದು ಅವನ ಭಾವನೆಯಾಗಿತ್ತೆಂದು ಕಂಡು ಬರುತ್ತದೆ. (ಪ್ರಾಚೀನಕಾಲದ ಜನರ ಕುರಿತಾದ ಮಾತು) ಯಾಕೆಂದರೆ ಆತನ ಚಿತ್ರಗಳಲ್ಲಿ ಮಾತೃದೇವತೆ ಕಂಡು ಬಂದಂತೆ ಪಿತೃದೇವತೆ

---

೦೧. ಡಾ. ಎಂ.ಬಿ. ಕೊಟ್ರಶೆಟ್ಟಿ (ಸಂ) : ಜಾನಪದ ಸಾಹಿತ್ಯ ದರ್ಶನ, ಭಾಗ-೮ ಪುಟ-೮೦
ಡಾ. ವಿಲ್ಕಂ ಮಾಡ್ತ ಅವರ ಲೇಖನ/ ಮಾತೃದೇವತೆಯ ಪರಿಕಲ್ಪನೆ

ಕಂಡು ಬರುವುದಿಲ್ಲ. ಇದನ್ನು ಸ್ಪಷ್ಟಪಡಿಸುವುದಾದರೆ ಕ್ಷೇತ್ರವೇ ಪ್ರಮುಖವಾದುದು, ಬೀಜದ ಸ್ಥಾನ ಅನಂತರದ್ದು ಎಂದಾಗುತ್ತದೆ. ಕ್ಷೇತ್ರವು ಸುವ್ಯವಸ್ಥಿತವಾಗಿ ಫಲಭರಿತವಾದರೆ ಬೀಜ ಮೊಳಕೆ ಒಡೆಯಲು ಸಾಧ್ಯ ಹರಪ್ಪಸಂಸ್ಕೃತಿಯಲ್ಲಿ ಪಿತೃಪ್ರಧಾನ್ಯವಿತ್ತು. ಲಿಂಗಪೂಜೆ ಆರಾಧನೆಗಳು ಈ ಹಿನ್ನೆಲೆಯಲ್ಲಿಯೇ ನಡೆದು ಬಂದಿದೆ. ಇದು ಜಗತ್ತಿನ ಎಲ್ಲೆಡೆ ಕಂಡು ಬಂದಿದೆ. ಹೀಗಿದ್ದರೂ ದ್ವಿಲಿಂಗದ ಕಲ್ಪನೆಯೂ ಇದೆ. ಭಾರತದ ಅರ್ಧನಾರೀಶ್ವರ ಕಲ್ಪನೆ ದ್ವಿಲಿಂಗದ ಕಲ್ಪನೆಯಿಂದ ಕೂಡಿದ್ದು[೨] ಮನೋವೈಜ್ಞಾನಿಕ ಮತದಂತೆ ಪ್ರತಿಯೋರ್ವನೂ ಸ್ವಭಾವತ ದ್ವಿ-ಲಿಂಗ (Androgynours) ರಾಗಿರುವದರಿಂದ ಆತ ಕಾಣಬಯಸುವ ಆಗಬಯಸುವ ಪೂರ್ಣದಲ್ಲಿಯೂ ದ್ವಿಲಿಂಗತ್ವವನ್ನು ಆಶಿಸುವುದು. ಸ್ವಾಭಾವಿಕ, ಪಾಶ್ಚಾತ್ಯ ಸಂಸ್ಕೃತಿಗಳ ಅಧ್ಯಯನ ಮಾಡುವಾಗ ಅಲ್ಲಿ ಜನಪದರ ಪುರತತ್ವ (The Other) ದಲ್ಲಿ ಉಭಯ ಲಿಂಗಗಳನ್ನು ಅಭೇದವಾಗಿ ಕಂಡಿರುವುದನ್ನು ತಿಳಿದುಕೊಳ್ಳುತ್ತೇವೆ. ಆದ್ದರಿಂದಲೇ ಅದರಲ್ಲಿಯೂ ಭಾರತದ ಅರ್ಧನಾರೀಶ್ವರಕ್ಕೆ ಸಂವಾದಿಯಾಗಿ ನಿಲ್ಲುವಂತಹ ಕಲ್ಪನೆ ಆಡಿಸ್, ಆ್ಯಡೋನಿಸ್, ಡಯಾನೀಸಿಯಸ್, ಮೊದಲಾದ ಗ್ರೀಕ್ ಸಸ್ಯ ದೇವತೆಗಳಲ್ಲಿ ನಾವು ಕಾಣಬಹುದು.

**ಮಾತೃದೇವತೆಯ ಕಲ್ಪನೆ – ಪಾಶ್ಚಾತ್ಯ ದೇಶಗಳಲ್ಲಿ**

ಯುರೋಪ ಖಂಡದ ಅನೇಕ ದೇಶಗಳಲ್ಲಿ ದೊರಕಿರುವ ಪ್ರಾಚೀನ ಶಿಲ್ಪಗಳಲ್ಲಿ ಹೆಚ್ಚಿನ ಶಿಲ್ಪಗಳು ಸ್ತ್ರೀ ಶಿಲ್ಪಗಳಾಗಿದ್ದು ಇವು ಮಾತೃದೇವತೆಗೆ ಸಂಬಂದ ಪಟ್ಟವು ಎಂದು ಹೇಳಲಾಗಿದೆ. ಇವುಗಳ ಕಾಲವು ಹಳೇ ಶಿಲಾಯುಗದವರೆಗೂ ಹೋಗುತ್ತವೆ. ಈ ವಿಗ್ರಹಗಳನ್ನು ವೀನಸ್‌ಗಳೆಂದು ಕರೆಯುತ್ತಾರೆ. ಲೈಂಗಿಕ ಆಚರಣೆಯ ಸಂಬಂಧದಲ್ಲಿ ಇವುಗಳಿಗೆ ಆಧ್ಯ ಸ್ಥಾನವಿತ್ತೆಂದು ಭಾವಿಸಲಾಗಿದೆ. ಈ ವಿಗ್ರಹಗಳು ಸೃಷ್ಟಿ ಸಮೃದ್ಧಿ ಹಾಗೂ ಜೀವನ ಮುಂದುವರಿಕೆಯ ಅಭಿವ್ಯಕ್ತಿಗಳೆಂದು ಹೇಳಲಾಗಿದೆ. ಹಳೆಯ ಶಿಲಾಯುಗದ ವೀನಸ್ ದೇವತೆಯ ವಿಗ್ರಹಗಳ ಚಿತ್ರಣ ಇಂದ್ರಿಯ ಕೇಂದ್ರಿತವಾಗಿದೆ. ಇದು ಸ್ತ್ರೀ ಶಕ್ತಿಯನ್ನು ಸೂಚಿಸುತ್ತದೆ. ಹಳೆಯ ಶಿಲಾಯುಗದಲ್ಲಿ ಇಂದ್ರಿಯಕವಾದ ಪ್ರತಿಕ್ರಿಯೆಯನ್ನು ಸ್ತ್ರೀ ದೇಹದ ಸಂಬಂಧದಲ್ಲಿ ತೋರಿಸಿದರೆ ಹೊಸ ಶಿಲಾಯುಗದಲ್ಲಿ ಈ ಭಾವನೆಯು ಕಡಿಮೆಯಾಗಿರುವುದನ್ನು ಕಾಣುತ್ತೇವೆ. ಆದರೆ ಹಳೆಯ ಶಿಲಾಯುಗ ಹೊಸ ಶಿಲಾಯುಗ ಇವೆರಡರಲ್ಲೂ ಸಮೃದ್ಧಿಯ ಆಸಕ್ತಿಯು ಸಮಾನವಾಗಿರುವುದನ್ನು ಕಾಣುತ್ತೇವೆ. ಹೊಸ ಶಿಲಾಯುಗದಲ್ಲಿ ಮಾತೃದೇವತೆಯ ಆರಾಧನೆಯು ಚಲಾವಣೆಯಲ್ಲಿದ್ದುದಕ್ಕೆ ಸಾಕಷ್ಟು ಆಧಾರಗಳು ದೊರೆತಿವೆ. ಮಣ್ಣಿನ, ಮೂಳೆಯ, ಕಲ್ಲಿನ

---

೦೨. ಡಾ. ಎಂ.ಬಿ. ಕೊಟ್ರಶೆಟ್ಟಿ (ಸಂ) : ಜಾನಪದ ಸಾಹಿತ್ಯ ದರ್ಶನ, ಭಾಗ-೮ ಪುಟ-೮೦
ಡಾ. ವಿಲ್ಯಂ ಮಾಡ್ತ ಅವರ ಲೇಖನ/ ಮಾತೃದೇವತೆಯ ಪರಿಕಲ್ಪನೆ

ಮಾತೃದೇವತೆಗಳ ಚಿತ್ರಗಳು, ಗೆರಿಕೊ ಎಂಬ ಪ್ರದೇಶದಲ್ಲಿ ಯಥೇಚ್ಛವಾಗಿ ದೊರಕಿವೆ.[೩]

ಪಿತೃದೇವತೆಗಿಂತ (Deas) ಮಾತೃದೇವತೆ (Dea)ಯ ಕಲ್ಪನೆ ಪ್ರಾಚೀನವೆಂಬ ಸತ್ಯ ಪ್ರಾಗೈತಿಹಾಸಿಕ ಜನವಾಸ್ತವ್ಯದ ನೆಲೆಗಳ ಉತ್ಖನನಗಳನ್ನು ಗಮನಿಸಿದಾಗ ನಮಗೆ ಖಚಿತವಾಗುತ್ತದೆ. ಯುರೋಪಿನ ಶಿಲಾಯುಗದ ಉತ್ಖನನಗಳನ್ನು ಗಮನಿಸಿದಾಗಲೂ ಬಹು ಪ್ರಾಚೀನ ಮಣ್ಣಿನ ಹಾಗೂ ಕಲ್ಲಿನ ಪ್ರತಿಮೆಗಳೆಂದರೆ ಮಾತೃದೇವತೆಯ ಪ್ರತಿಮೆಗಳೆ (Figorines) ಇವು ಸುಮಾರು ಮೂವತ್ತು ಸಾವಿರ ವರ್ಷಗಳ ಹಿಂದೆಯೇ ಮಧ್ಯ ಏಷ್ಯಾದಿಂದ ಬಂದವುಗಳೆಂದು ಪುರಾತತ್ವ ವಿಜ್ಞಾನಿಗಳು (Arehcologists) ಅಭಿಪ್ರಾಯ ಪಟ್ಟಿದ್ದಾರೆ. ಕಿನ್ಯಾದಲ್ಲಿ ಸುಮಾರು ಐವತ್ತು ಸಾವಿರ ವರ್ಷಗಳ ಅಂದಿನ ಮಾತೃದೇವತೆಯ ರೂಪ ಲಭಿಸಿದೆ. ಪಾಶ್ಚಾತ್ಯ ದೇಶಗಳಲ್ಲಿ ಅತ್ಯಂತ ಪ್ರಾಚೀನ ಕಾಲಕ್ಕೆ ಸೇರಿದ ಸುಮಾರು ಅರವತ್ತು ಮೂರ್ತಿಗಳಲ್ಲಿ ಅವುಗಳ ತಲೆಗಳು ಚಪ್ಪಟೆಯಾಗಿದ್ದು ಸ್ತನ ನಿತಂಬಗಳು ಬೃಹದಾಕಾರದವುಗಳಾಗಿದ್ದು ಕಂಡು ಬರುತ್ತದೆ ಯಾದುದರಿಂದ ಅವು ಯಾವುದೇ ನಿರ್ಧಿಷ್ಟ ಹೆಂಗಸರ ಪ್ರತಿರೂಪಗಳಾಗಿರದೇ ವಿಶ್ವಜನನಿ (Mother of Universe) ಯ ಸಂಕೇತವೆಂದು ಊಹಿಸಲು ಸಾಧ್ಯವಾಗುತ್ತದೆ.[೪]

ಇವುಗಳನ್ನು ನೋಡಿದರೆ ಮಾತೃದೇವತೆಯ ಕಲ್ಪನೆ ಎಂಬುದು ಮಾನವನ ಪ್ರಾರಂಭದ ದಿನಗಳಿಂದಲೇ ಬೆಳೆದು ಬಂದಿದೆ ಎಂಬುದನ್ನು ಗಮನಿಸಬಹುದು. ಜಗತ್ತಿನಾದ್ಯಂತ ಮಾನವನ ವಾಸದ ಎಲ್ಲೆಡೆ ಈ ರೀತಿಯ ಚಿತ್ರಗಳನ್ನು ನೋಡಬಹುದು. ಇದಕ್ಕೆ ಕಾರಣ ಮನುಷ್ಯನ ಹುಟ್ಟಿನ ಕುರಿತಾಗಿ ಆತನಿಗೆ ಇದ್ದ ಸಂಶಯ ನಿವಾರಣೆಯಾಗಿ ಹೆಣ್ಣಿನ ಮಹತ್ವದ ಅರಿವಾಗಿದ್ದಿರಬಹುದು. ವಿಲ್ಲಂಡರ್ಪನಲ್ಲಿ ದೊರೆತಿರುವ ಶಿಲ್ಪವನ್ನು ನೋಡಿದಾಗ ನಮಗೆ ಈ ವಿಚಾರ ಸ್ಪಷ್ಟವಾಗುತ್ತದೆ. ದಷ್ಟ ಪುಷ್ಟವಾದ ಸ್ತನ, ಸೊಂಟ, ಹೊಟ್ಟೆಯ ಭಾಗ ಕೊಬ್ಬಿದ ತೊಡೆಗಳು ಇವು ನಿಸ್ಸಂಶಯವಾಗಿ ಹೆಣ್ಣನ್ನು ಮಾನವ ನೋಡಿದ ರೀತಿಯನ್ನು ಸೃಷ್ಟಿಪಡಿಸುತ್ತದೆ.

ಹೆಣ್ಣಿನ ಗರ್ಭಧಾರಣೆ ಮತ್ತು ಭೂಮಿಗೆ ಸಸ್ಯ-ಧಾರಣೆ ಇವೆರಡಕ್ಕೂ ಸಾಮ್ಯತೆಯನ್ನು ಕಂಡುಕೊಂಡ ಆಧಿಮಾನವ ಹೆಣ್ಣು ಮತ್ತು ಭೂಮಿ ಇವೆರಡೂ ಪೂಜ್ಯ ವಸ್ತುಗಳೆಂದು ಭಾವಿಸಿದ, ಸಮೃದ್ಧಿಯ ಆಚರಣೆಯಾಗಿ ಇದರ ಮುಂದುವರೆದ ರೂಪವೇ ಶಾಕ್ತಪಂಥ ಪ್ರಪಂಚದ

---

೦೩. ಮೊಗಳ್ಳಿ ಗಣೇಶ(ಸಂ) : ದಲಿತ ಚಿಂತನೆ, ಪುಟ-೯೭ ಡಾ. ಸಿದ್ದಲಿಂಗಯ್ಯನವರ ಲೇಖನ/ ಗ್ರಾಮದೇವತೆಯ ಪರಿಕಲ್ಪನೆ.

೦೪. ಡಾ. ಎಂ.ಬಿ. ಕೊಟ್ರಶೆಟ್ಟಿ (ಸಂ) : ಜಾನಪದ ಸಾಹಿತ್ಯ ದರ್ಶನ, ಭಾಗ-೮ ಪುಟ-೮೧ ಡಾ. ವಿಲ್ಯಂ ಮಾಡ್ತ ಅವರ ಲೇಖನ/ ಮಾತೃದೇವತೆಯ ಪರಿಕಲ್ಪನೆ

ಯಾವುದೇ ಸಂಸ್ಕೃತಿಯಲ್ಲಿ ಕೃಷಿಯ ಆರಂಭದ ಕಾಲದಲ್ಲಿ ಹುಟ್ಟಿದ ಈ ಧರ್ಮವು ಒಂದೇ ಮೂಲ ಆಶಯುವನ್ನು ಹೊಂದಿದ್ದು ಆಯಾ ಪ್ರದೇಶಕ್ಕೆ ಅನುಗುಣವಾಗಿ ವೈಲಕ್ಷಣಗಳನ್ನು ಹೊಂದಿರುತ್ತದೆ. ಕೃಷಿಯ ಆರಂಭದ ಚರಿತ್ರೆಯಲ್ಲಿ ಹೆಣ್ಣಿನ ಸ್ಥಾನಮಾನಗಳನ್ನು ಗಮನಾರ್ಹವಾಗಿ ಬದಲಾವಣೆ ಮಾಡಿತಲ್ಲದೆ ಅನೇಕ ಸ್ತ್ರಿ ದೇವತೆಗಳ ಹುಟ್ಟಿಗೆ ಕಾರಣವಾಯಿತು. ಈಗಾಗಲೇ ಇದ್ದ ಸ್ತ್ರೀ ದೇವತೆಗಳು ಪ್ರವರ್ದಮಾನಕ್ಕೆ ಬರಲು ಪೂರಕವಾಯಿತು. ಸ್ತ್ರೀಯನ್ನು ಕುರಿತು ಪೂಜ್ಯ ಭಾವನೆಯ ಜೊತೆಗೆ ಪ್ರಪಂಚದ ಎಲ್ಲ ದೇವರುಗಳು ಶಕ್ತಿಯಿಂದ ಸೃಷ್ಟಿಯಾದವು ಎಂಬ ನಂಬಿಕೆ ಬೆಳೆಯುತೊಡಗಿತು ಜಗದಂಬೆ ಜಗನ್ಮಾತೆ ಈ ಪರಿಕಲ್ಪನೆಗಳು ಜನಮನದಲ್ಲಿ ಗೆಟ್ಟಿಯಾದವು. ಶಕ್ತಿಯು ಚಿರಕನ್ಯೆಯೆಂದೂ ಗರ್ಭಧರಿಸದೆಯೇ ದೇವರುಗಳನ್ನು ಜನಸಮುದಾಯುವನ್ನು ಸೃಷ್ಟಿಸಿದಳೆಂದೂ ಪುರಾಣ ಕಥೆಗಳು ಹುಟ್ಟಿಕೊಂಡವು. ಅನೇಕ ಸಂಸ್ಕೃತಿಗಳಲ್ಲಿ ಸ್ತ್ರೀ ದೇವತೆ ತನ್ನ ಗಂಡ ನಾಗುವವನನ್ನು ಸೃಷ್ಟಿಸಿದವಳಾಗಿದ್ದಾಳೆ. ಆಕೆ ತನ್ನ ಮಗ ಅಥವಾ ತನಗಿಂತ ಕಿರಿಯನಾಗಿ ಕಾಣುವ ಪುರುಷ ದೇವತೆಯ ಜೊತೆಯಲ್ಲಿ ನಿಂತಿರುವ ಚಿತ್ರಗಳು ಜಗತ್ತಿನಾದಂತ ಕಂಡು ಬರುತ್ತವೆ. ಇಸಿಸ್ ದೇವತೆಯು ಹೊರಸ್ ಜೊತೆಯೂ, ಅಷ್ಟಾರ್ಟ ದೇವತೆ ಟಾಮ್ಮುಜಿನೊಂದಿಗೂ, ಸಿಬಿಲೆ ದೇವತೆ ಅಟ್ಟಿಸ್-ನೊಡನೆಯೂ ನಿಂತಿರುವುದಕ್ಕೆ ಸಾಕ್ಷಿಯಾಗಿದೆ.[೫] ಈ ರೀತಿಯ ಚಿತ್ರಗಳು ಭಾರತ ಉಪಖಂಡದಲ್ಲಿಯೂ ಅಲ್ಲಲ್ಲಿ ಸ್ತ್ರಿದೇವತೆಯು ದೊಡ್ಡದಾಗಿ ಸಣ್ಣ ಗಾತ್ರದಲ್ಲಿ ಋಷಿಗಳು, ಉದಾ:- ಕಾಳಿಯು ಶಿವನನ್ನು ಮೆಟ್ಟಿನಿಂತ ಚಿತ್ರ. ಗಣೇಶ, ಇತ್ಯಾದಿ, ಶಿಲ್ಪಗಳು, ಕೈ ಮುಗಿದ, ಭಂಗಿಯಲ್ಲಿ ನಿಂತಿರುವುದನ್ನು ಕಾಣಬಹುದು.

ಇಲ್ಲೆಲ್ಲಾ ಸ್ತ್ರೀಯ ಪ್ರಾಮುಖ್ಯತೆಯನ್ನು ನಾವು ಗಮನಿಸಬಹುದು. ಜಗತ್ತಿನೆಲ್ಲೆಡೆ ಪ್ರಾಚೀನ ಕಾಲದಲ್ಲಿ ಸ್ತ್ರೀಯು ಕೇವಲ ಹೆರುವ ಗೊಂಬೆಯಾಗಿ ಅಥವಾ ಗಂಡಿನ ನಂತರದ ಸ್ಥಾನದಲ್ಲಿ ಇರಲಿಲ್ಲ. ಬದಲಾಗಿ ಆಕೆಯೇ ಮುಖ್ಯಳಾಗಿದ್ದಳೆಂಬುದನ್ನು ತೋರಿಸಿಕೊಡುತ್ತದೆ. ಇನ್ನೊಂದು ವಿಚಾರವನ್ನು ನಾವಿಲ್ಲಿ ಗಮನಿಸಬಹುದು. ಅದರಂತೆ ಸ್ತ್ರೀಯ ಚಿತ್ರವನ್ನು ನೈಜವಾಗಿ ಚಿತ್ರಿಸಿದೆ. ಸಂಜ್ಞೆಗಳ ಮೂಲಕವೇ ಚಿತ್ರಿಸಿರುವುದು ಕಂಡು ಬರುತ್ತದೆ. ಅದೆಂದರೆ ಇಲ್ಲಿ ಮಾತೆ ಎಂಬ ವ್ಯಕ್ತಿ ಮುಖ್ಯವಾಗುವುದಿಲ್ಲ ಬದಲಾಗಿ ಶಬ್ದವೇ ಹೆಚ್ಚು ಧ್ವನಿಯನ್ನು ತೋರಿಸಿ ಕೊಡುತ್ತದೆ. ಮಾತೆ ಏನಿದ್ದರೂ ಮಾತೆಯೇ ಆ ಅನುಭವವೇ ವಿಶಿಷ್ಟ ಅನುಭವವನ್ನುಂಟು ಮಾಡುತ್ತದೆ. ಸ್ತ್ರಿ ಸಂಕೇತವನ್ನು ತೆಗೆದುಕೊಂಡಾಗ ಯಾರಿಗಾದರೂ ಮೊದಲು ನೆನಪಾಗುವುದು ತಾಯಿಯದು

---

೦೫. ಮೊಗಳ್ಳಿ ಗಣೇಶ (ಸಂ) : ದಲಿತ ಚಿಂತನೆ, ಪುಟ-೯೫ ಡಾ. ಸಿದ್ದಲಿಂಗಯ್ಯನವರ ಲೇಖನ/ ಗ್ರಾಮದೇವತೆಯ ಪರಿಕಲ್ಪನೆ

ಯಾಕೆಂದರೆ ತಾಯಿಯಾನುಭವವೇ ಮಾನವನ ಮೊದಲನುಭವ ಗರ್ಭಧಾರಣೆಯಾಗಲು ತಾಯ್ತಂದೆಯರಿರ್ವರೂ ಬೇಕೆ ಬೇಕಾದರೂ ಕೂಸಿಗೆ ತಾನು ಹುಟ್ಟುವ ಪೂರ್ವಕಾಲ ದಿಂದಲೂ ಹತ್ತಿರದವಳೆಂದರೆ ತಾಯಿಯೊಬ್ಬಳೇ ಆಕೆಯ ಮೂಲಕವೇ ಅದರ ಆಹಾರ ಹಾಗೂ ಬೆಳವಣಿಗೆ ಹುಟ್ಟಿದ ಮೇಲ್ಲಾದರೂ ತಾಯಿಯೇ ಅದಕ್ಕೆ ಆಶ್ರಯ ಆಕೆಯ ಮೊಲೆಯೇ ಅದಕ್ಕೆ ಆಹಾರ, ಆಕೆಯ ತೊಡೆಯೇ ಅದಕ್ಕೆ ಆಧಾರ ನಮ್ಮ ಅನುಭವಗಮ್ಯ ತಾಯಿ ನಮ್ಮ ಹುಟ್ಟಿಗೆ ಪೋಷಣೆಗೆ ರಕ್ಷಣೆಗೆ ಕಾರಣಳಾಗಿರುವಂತೆ ವಿಶ್ವದ ಸೃಷ್ಟಿಗೆ ಬೆಳವಣಿಗೆಗೆ, ಸಂರಕ್ಷಣೆಗೆ, ಕಾರಣೀ ಬೂತೆಯಾದವಳೇ ಮಹಾಮಾತೆ.[೬]

ಬೃಹತ್ ಶಿಲಾಯುಗದ ಜನಾಂಗದಲ್ಲಿ ಮಾತೃದೇವತೆಯು ಆರಾಧನೆ ಇದ್ದುದಕ್ಕೆ ಸಾಕಷ್ಟು ಪುರಾವೆಗಳು ದೊರೆಯುತ್ತವೆ. ಮಾಲ್ತಸ್ ರೈತ ಜನಾಂಗದ ದೇವಾಲಯುಗಳಲ್ಲಿ ಕಲ್ಲಿನ ಸ್ತ್ರೀ ವಿಗ್ರಹಗಳು ದೊರೆತಿವೆ. ಇಲ್ಲಿಯ ದೇವತೆ ಒಂದು ಎತ್ತಿನ ಜೊತೆಗೆ ನಿಂತಿರುವುದನ್ನು ಕಾಣುತ್ತೇವೆ. ಹಳೆಯ ಶಿಲಾಯುಗದಲ್ಲಿ ಹೆಣ್ಣನ್ನು ಕುರಿತಂತೆ ಭಯ ಮತ್ತು ಕೂತುಹಲಗಳು ಮಾತ್ರ ಪ್ರಧಾನವಾಗಿದ್ದು ಆಕೆಯ ಆರಾಧನೆಗೆ ಖಚಿತ ರೂಪ ಬಂದಿದ್ದನ್ನು ಕಾಣುತ್ತೇವೆ. ಈ ಕಾಲ ಘಟ್ಟದಲ್ಲಿ ಸಸ್ಯವು ಬೆಳೆಯಲು ಕಾರಣವಾಗುವ ಬೀಜದ ಪಾತ್ರವನ್ನು ಮಾನವ ಅರಿತಿರಲಿಲ್ಲ. ಹಾಗೆಯೇ ಮಗುವಿನ ಸೃಷ್ಟಿಗೆ ಕಾರಣವಾಗುವ ಪುರುಷನ ಪಾತ್ರವು ತಿಳಿದಿರಲಿಲ್ಲ, ಆದ್ದರಿಂದ ಸೃಷ್ಟಿಕಾರ್ಯ ಹೆಣ್ಣು ಮತ್ತು ಭೂಮಿಯಿಂದ ಮಾತ್ರ ಸಾಧ್ಯ ಎಂದು ಭಾವಿಸಲಾಗಿತ್ತು. ಮನುಷ್ಯನ ಈ ಭಾವನೆ ಸ್ತ್ರೀ ಆರಾಧನೆಗೆ ದಾರಿ ಮಾಡಿಕೊಟ್ಟಿತು.[೭]

ಕಂಚಿನ ಯುಗಕ್ಕಾಗಲೇ ಮಾತೃದೇವತೆಯ ಪಂಥದ ಬೆಳವಣಿಗೆ ದೊಡ್ಡ ಪ್ರಮಾಣದಲ್ಲಾಗಿತ್ತು ಈಜಿಪ್ತ, ಮೆಸಪೊಟಿಮಿಯಾ, ಎಗಿಯನ್, ಸಮುದ್ರತಾರ ಮತ್ತು ಭಾರತದಲ್ಲಿ ಇದಕ್ಕೆ ಸಾಕ್ಷಾಧಾರಗಳು ದೊರೆತಿವೆ. ಸಿಂಧೂ ಮತ್ತು ಪಿಲ್ ನದಿಯ ತೀರದ ನಾಗರೀಕತೆಯಲ್ಲೂ ಮಾತೃದೇವತೆಯ ಆರಾಧನೆ ಇದ್ದುದನ್ನು ಎಲ್ಲರೂ ಒಪ್ಪುತ್ತಾರೆ. ಕಂಚಿನಯುಗವು ಕೃಷಿ ಮತ್ತು ಪಶುಪಾಲನೆ ಯುಗವಾಗಿತ್ತು, ಈ ಯುಗದಲ್ಲಿ ಸುಮೇರಿಯಾ ಸಂಸ್ಕೃತಿ ಭೂಮಿಯನ್ನು ನಾನಾ ಬಗೆಯಲ್ಲಿ ಆರಾಧಿಸಿರುವುದನ್ನು ನೋಡುತ್ತೇವೆ. ನಿಂಟೋ ನಿನ್‌ಮಾರ್, ನಿಂಕುರ್ಸನ್ ಈ ದೇವತೆಗಳು ಅಲ್ಲಿ ಮುಖ್ಯವಾದವುಗಳಾಗಿವೆ. ಈಜಿಪ್ತನಲ್ಲಿ ಇಸಿಸ್ ದೇವತೆ ಪ್ರಧಾನವಾಗಿ ಕಂಡು

---

೦೬. ಡಾ. ಎಂ.ಬಿ. ಕೊಟ್ರಶೆಟ್ಟಿ (ಸಂ) : ಜಾನಪದ ಸಾಹಿತ್ಯ ದರ್ಶನ, ಭಾಗ-೮ ಪುಟ-೮೩-೮೪ ಡಾ. ವಿಲ್ಯಂ ಮಾಡ್ತ ಅವರ ಲೇಖನ/ ಮಾತೃದೇವತೆಯ ಪರಿಕಲ್ಪನೆ

೦೭. ಪ್ರೊ. ಬಿ.ವಿ. ವೀರಭದ್ರಪ್ಪ (ಸಂ) : ದೇವರನ್ನು ಕುರಿತು ಒಂದು ಬಹುಮುಖಿನೋಟ. ಪುಟ-೨೩೦ ಸಿದ್ದಲಿಂಗಯ್ಯನವರ ಲೇಖನ/ಗ್ರಾಮದೇವತೆಯ ಪರಿಕಲ್ಪನೆ

ಬರುತ್ತಾಳೆ. ಈಕೆ ಎಲ್ಲ ಬಗೆಯ ಚೈತನ್ಯದ ಮೂಲವಾಗಿರುವುದಲ್ಲದೇ ನಂಬಿಕಸ್ಥ ಹೆಂಡತಿಯ ತಾಯಿಯ ಮೂಲರೂಪವಾಗಿದ್ದಾಳೆ. ಹೊರಸನಿಗೆ ಈಕೆಯ ಮೊಲೆ ಉಣಿಸುತ್ತಿರುವ ಚಿತ್ರ ಸಿಕ್ಕಿರುವುದರಿಂದ ಈಕೆಯನ್ನು ಮಾತೃದೇವತೆಯೆಂದು ಹೇಳಲಾಗಿದೆ. ಆದರೂ ಆಕೆ ಗರ್ಭ ಧರಿಸುತ್ತಾಳೆ ಮತ್ತು ಒಬ್ಬ ಮಗನಿಗೆ ಜನ್ಮ ನೀಡುತ್ತಾಳೆ. ಇಸಿಸ್ ದೇವತೆ ಈಜಿಪ್ತನ ಎಲ್ಲ ದೇವತೆಗಳೊಂದಿಗೆ ಒಂದಲ್ಲ ಒಂದು ಬಗೆಯ ಸಂಬಂಧವನ್ನು ಹೊಂದಿದ್ದಾಳೆ. ಈಕೆಯು ಎಲ್ಲ ದೇವರುಗಳ ಮತ್ತು ದೇವತೆಗಳ ರಾಣಿಯಾಗಿರುವಳಲ್ಲದೇ ಸ್ವರ್ಗ ಮಾತೆಯೂ ಆಗಿದ್ದಳು.[೮] ಇದೇ ರೀತಿಯ ಕಲ್ಪನೆ ಭಾರತ ಉಪಖಂಡದಲ್ಲಿಯೂ ನಾವೂ ನೋಡುತ್ತೇವೆ. ಇಲ್ಲಿ ನಾವು ಆದಿ ಶಕ್ತಿ ಎಂದು ಹೇಳುವ ದೇವಿಯು ತ್ರಿಮೂರ್ತಿಗಳ ತಾಯಿಯಾಗಿದ್ದು ಆಕೆಯೇ ಈ ಲೋಕದ ಸಮಸ್ತ ಆಗು ಹೋಗುಗಳಿಗೆ ಕಾರಣಳೆಂಬುದು ನಂಬುಗೆ ಆಕೆಯೇ ಮುಂದೆ ಚಾಮುಂಡಿ ಮಹಿಷ ಮರ್ಧಿನಿ, ದುರ್ಗಾ ಎಂದು ಕರೆಯಲ್ಪಡುವ ವಿಚಾರವು ದೇವಿಭಾಗವತದಲ್ಲಿ ವರ್ಣಿಸಲ್ಪಟ್ಟಿದೆ.

ಮಾತೃದೇವತೆಯು ಆರಾಧನೆಯ ಹಿನ್ನಲೆಯಲ್ಲಿರುವ ಮುಖ್ಯ ಉದ್ದೇಶವೆಂದರೆ ಸ್ತ್ರೀ ತತ್ವವನ್ನು ಗೌರವಿಸುವುದು. ಆಕೆಯ ವಿಶೇಷತೆಯಾದ ಸೃಷ್ಟಿ ಮತ್ತು ಪೋಷಣೆಗೆ ಕೃತಜ್ಞತೆಯನ್ನು ಅರ್ಪಿಸುವುದೇ ಆಗಿದೆ. ಹೀಗೆ ಸೃಷ್ಟಿ ಮತ್ತು ಪಾಲನೆಗೆ ಕಾರಣಳಾದ ಆಕೆ ಸಿಟ್ಟುಗೊಂಡಾಗ ವಿನಾಶಕಾರಿಣಿಯೂ ಆಗಿರುತ್ತಾಳೆ ಎಂಬ ನಂಬಿಕೆ ಬೆಳೆದು ಬಂದಿದೆ. ಇಂತಹ ಶಕ್ತಿ ಇರುವ ಹೆಣ್ಣನ್ನು ಶಕ್ತಿಯನ್ನು ಎಂದೆಂದಿಗೂ ಸಂಪ್ರೀತಿಯಲ್ಲಿಡುವುದು ಇದರ ಹಿನ್ನೆಲೆಯಾಗಿದೆ. ಇದು ಎಲ್ಲೆಡೆಯಲ್ಲಿಯೂ ಮಾತೃದೇವತೆಯ ಹಿಂದಿರುವ ಕಲ್ಪನೆ ಜಗತ್ತಿನ ಯಾವುದೇ ಭಾಗದಲ್ಲಿ ನೋಡಿದರೂ ಶಾಂತಳಾದ ತಾಯಿಯನ್ನು ಸ್ತ್ರೀಯನ್ನು ಪೂಜಿಸುವಂತೆಯೇ. ಉಗ್ರರೂಪಳಾದ ಮಾತೆಯನ್ನು ಪೂಜಿಸುವುದನ್ನು ನಾವು ನೋಡುತ್ತೇವೆ. ಇದಕ್ಕೆ ಹಲವಾರು ರೂಪಗಳಿವೆ. ಚಾಮುಂಡಿ. ಕಾಳಿ ಚಂಡಿ, ಎಂದು ನಾವು ಕರೆಯುವ ಈಕೆ ಎಲ್ಲೆಡೆಯು ಕಂಡು ಬರುತ್ತಾಳೆ.. ಇದಕ್ಕೆ ಸಂಬಂಧಿಸಿದ ಜನಪದ ಕಥೆಗಳು ನಂಬಿಕೆಗಳು ಎಲ್ಲಡೆ ಕಂಡು ಬರುತ್ತವೆ. ಅಮೇರಿಕೆಯ ಕಾನಬ ಇಂಡಿಯನ್ನರಲ್ಲಿ ಮಹಾತಾಯಿಯ ಭಕ್ತಿ ಈ ರೀತಿ ಕಂಡು ಬರುತ್ತದೆ. ಅವರ ಜಾನಪದದಲ್ಲಿ ಮಹಾತಾಯಿಯ ವರ್ಣನೆ ಇಂತಿದೆ... ನಮ್ಮ ಹಾಡುಗಳ ತಾಯಿ ನಮ್ಮ ಸಂತತಿಯ ತಾಯಿ ನಮ್ಮನ್ನು ಆದಿಕಾಲದಲ್ಲಿ ಹಡೆದಳು ಆಕೆ ಎಲ್ಲ ಜನಾಂಗಗಳ ಮತ್ತು ಎಲ್ಲ ಬುಡಕಟ್ಟುಗಳ ತಾಯಿ ಆಕೆ ಸಿಡಿಲಿನ ತಾಯಿ, ಮರಗಳ ತಾಯಿ ಅಂತೆಯ ವಿವಿಧ ವಸ್ತುಗಳ ತಾಯಿ ಆಕೆ.

---

೦೮. ಪ್ರೊ. ಬಿ.ವಿ. ವೀರಭದ್ರಪ್ಪ (ಸಂ) : ದೇವರನ್ನು ಕುರಿತು ಒಂದು ಬಹು ಮುಖಿನೋಟ, ಪುಟ- ೨೩೦-೨೩೧ ಸಿದ್ದಲಿಂಗಯ್ಯನವರ ಲೇಖನ/ಗ್ರಾಮದೇವತೆಯ ಪರಿಕಲ್ಪನೆ

ಹಾಡುಗಳ, ಕುಣಿತಗಳ ತಾಯಿ, ಆಕೆ ಅಣ್ಣಂದಿರಾದ ಕಲ್ಲುಗಳ ತಾಯಿ ಆಕೆ ದವಸ ದಾನ್ಯಗಳ ತಾಯಿ, ಹಾಗೂ ಎಲ್ಲದರ ತಾಯಿ ಆಕೆ ನಮ್ಮ ತಮ್ಮಂದಿರಾದ ಪ್ರೆಂಚರಾದಿ ಅನ್ಯರ ತಾಯಿ ಆಕೆ ನೃತ್ಯ ಸಲಕರಣೆಗಳ ತಾಯಿ ಆಕೆಯೇ ನಮ್ಮ ಏಕೈಕ ತಾಯಿ, ಆಕೆ ಪ್ರಾಣಿಗಳ ತಾಯಿ ಆಕೆ ಆಕಾಶಗಂಗೆಯು ತಾಯಿಯೂ ಹೌದು...[೯]

ಇಲ್ಲಿ ನಾವು ಗಮನಿಸಬೇಕಾದುದು ಆದಿ ಮಾನವ ಜನಾಂಗದಲ್ಲಿ ಜನಪದದಲ್ಲಿ ಮಾತೆಯ ಬಗ್ಗೆ ಇರುವ ಗೌರವವನ್ನು ಪ್ರತಿಯೊಂದು ವಸ್ತುವಿನಲ್ಲಿಯೂ ಎಲ್ಲಾ ಜನರಲ್ಲಿಯೂ (ನಮ್ಮ ತಮ್ಮಂದಿರಾದ ಪ್ರೆಂಚರಾದಿ, ಅನ್ಯರ) ಅಂದರೆ ಎಲ್ಲರ ಸೃಷ್ಟಿಗೂ ಕಾರಣೀ ಭೂತಳಾದವಳು ಒಬ್ಬಳೇ ಆಕೇಯೇ ಮಹಾಮಾತೆ ಎಂಬ ನಂಬಿಕೆ ಈ ಜನಾಂಗದಲ್ಲಿ ಎಷ್ಟು ಪ್ರಬಲವಾಗಿ ಬೇರೂರಿತ್ತು ಎಂಬುದಕ್ಕೆ ನಿದರ್ಶನವಾಗಿದೆ ಇದು ಕೇವಲ ಕಾನಬ ಇಂಡಿಯನ್ನರ ಮಾತಲ್ಲ ಬದಲಾಗಿ ಅಂದಿನ ಎಲ್ಲ ಜನರಲ್ಲಿಯೂ ಈ ನಂಬಿಕೆ ಬೇರೂರಿತ್ತು. ಆದುದರಿಂದಲೇ ಜಗತ್ತೀನ ಎಲ್ಲೆಡೆಯೂ ಯಾವ ಸಂಪರ್ಕಗಳ ಇಲ್ಲದ ಖಂಡಾಂತರಗಳಲ್ಲಿ ಕೂಡಾ ಏಕರೀತಿಯಾಗಿ ತಾಯಿಯನ್ನು ಒಂದೇ ರೀತಿಯೆಂದು ಪೂಜಿಸುತ್ತಿದ್ದದನ್ನು ನಾವು ಕಾಣುತ್ತೇವೆ.

ಮೆಕ್ಸಿಕರ ಜಾನಪದದಲ್ಲಿ ಕ್ಸೊಕಿಕ್ವೆತ್ಸಾಲ್ (Xochiquetyol) ಎಂಬ ಮಹಾಮಾತೆಗೆ ಅಗ್ರಸ್ಥಾನ ದೊರಕಿದೆ. ಕಿಲ್ಮ ಜನಾಂಗದಲ್ಲಿ ದಾನು/ಆನು ಎಂಬ ಮಹಾಮಾತೆ ಎಲ್ಲ ದೇವತೆಗಳಿಗೂ ಮಿಗಿಲಾದ ದೇವತೆ ಆಕೆಗೆ ನರಬಲಿಗಳನ್ನು ಕೂಡಾ ಅರ್ಪಿಸುತ್ತಿದ್ದರು. ಉತ್ತರ ಯೂರೋಪಿನ ಜನಪದದಲ್ಲಿ ಪ್ರೇಯ (Freya) ಈ ರೀತಿಯಲ್ಲಿ ಸುಪ್ರಸಿದ್ಧಳು.

ಪಾಶ್ಚಾತ್ಯ ಸಂಸ್ಕೃತಿಗೆ ಸೇರಿದ ಯೆಹೂದಿ ಜನಪದದಲ್ಲಿ ಹುಟ್ಟಿಕೊಂಡು ಮೆಡಿಟೆರೇನಿಯನ್ ದೇಶಗಳನ್ನು ತನ್ನ ಕಡೆಗೆ ತಿರುಗಿಸಿದ ಕ್ರಿಸ್ತ ಧರ್ಮ ಪಾಶ್ಚಾತ್ಯ ದೇಶಗಳಲ್ಲಿ ಕಾಲಿಟ್ಟಂತೆಯೇ ಅಲ್ಲಿನ ಸನಾತನ ದೇವತೆಗಳು ಪಲ್ಲಟಗೊಂಡು ಕ್ಷುದ್ರದೇವತೆ (Mon) ಗಳಾಗಿ ಮಾರ್ಪಾಡು ಹೊಂದಿದರು. ಆದರೆ ಮಹಾಮಾತೆಯು ಭಕ್ತಿಯುನ್ನು ಮಾತ್ರ ಜನಪದ ಹೃದಯದಿಂದ ಕದಲಿಸುವುದು ಕ್ರೈಸ್ತ ಭಕ್ತಿಗೂ ಸಾಧ್ಯವಾಗಲಿಲ್ಲ. ಕಾರಣ ಕ್ರೈಸ್ತ ಧರ್ಮ ಸನಾತನ ಮಾತೆಯು ಭಕ್ತಿಯುನ್ನು ಕ್ರೈಸ್ತ ಮಾತೆ ಮರಿಯುಮ್ಮ (ಮಿಂಯುವ್) ನಲ್ಲಿ ಪರಿವರ್ತಿಸಿ ಭವ್ಯೀಕರಿಸಿತು.[೧೦]

---

೦೯. ಡಾ. ಎಂ.ಬಿ. ಕೊಟ್ರಶೆಟ್ಟಿ (ಸಂ) : ಜಾನಪದ ಸಾಹಿತ್ಯ ದರ್ಶನ, ಭಾಗ-೮ ಪುಟ-೮೫
ಡಾ. ವಿಲ್ಯಂ ಮಾಡ್ತ ಅವರ ಲೇಖನ/ ಮಾತೃದೇವತೆಯ ಪರಿಕಲ್ಪನೆ

೧೦. ಡಾ. ಎಂ.ಬಿ. ಕೊಟ್ರಶೆಟ್ಟಿ (ಸಂ) : ಜಾನಪದ ಸಾಹಿತ್ಯ ದರ್ಶನ, ಭಾಗ-೮ ಪುಟ-೮೬
ಡಾ. ವಿಲ್ಯಂ ಮಾಡ್ತ ಅವರ ಲೇಖನ/ ಮಾತೃದೇವತೆಯ ಪರಿಕಲ್ಪನೆ

ಫ್ರಿಜಿಯಾದ ಮಾತೃದೇವತೆಯಾದ ಸಿಬಲಿಯು ಮೂಲರೂಪದಲ್ಲಿ ಸಮೃದ್ಧಿಯ ದೇವತೆಯೇ ಆಗಿದ್ದಾಳೆ ಈಕೆಯ ಆರಾಧನೆಯು ಏಷ್ಯಾ ಮೈನರ್‌ನಲ್ಲಿ ಆರಂಭವಾಯಿತೆಂದು ಹೇಳಲಾಗಿದೆ. ಇವಳು ಎಲ್ಲ ದುಷ್ಟ ಶಕ್ತಿಗಳ ನೇತಾರಳಲ್ಲದೆ ಮನುಷ್ಯರ ಪ್ರಾಣಿಗಳ ಸಂರಕ್ಷಕಳಾಗಿದ್ದಾಳೆ. ಯುದ್ಧದಲ್ಲಿ ಜನಗಳನ್ನು ಕಾಪಾಡುವಳು. ಮೃತರನ್ನು ಪೋಷಿಸುವ ಹೊಣೆಗಾರಿಕೆ ಇವಳದಾಗಿದೆ. ಆಟ್ಮೀಸ್ ಕಾವಳ ತರುಣ ಪ್ರೇಮಿಯಾಗಿದ್ದಾನೆ. ಕ್ರೇಟ್ ಪ್ರದೇಶದ ಮಾತೃದೇವತೆಯು ವೈವಿಧ್ಯತೆಯುಳ್ಳವಳಾಗಿದ್ದಾಳೆ. ಈಕೆ ಸರ್ಪದೇವತೆಯಾಗಿ ಪಾರಿವಾಳದ ದೇವತೆಯಾಗಿ ಕ್ರೂರಮೃಗಗಳಿಗೆ ಸಂಬಂಧಿಸಿದ ದೇವತೆಯಾಗಿ ಕಾಣಿಸಿಕೊಳ್ಳುತ್ತಾಳೆ.[೧೧] ಕರಾವಳಿ ಕರ್ನಾಟಕದಲ್ಲಿ ಇಂದಿಗೂ ಕ್ರೂರ ಪ್ರಾಣಿಗಳ ದೇವತೆಯಾಗಿ ಚಾಮುಂಡಿಯನ್ನು ಪಿಲಿಚಂಡಿ (ಹುಲಿ ಚಾಮುಂಡಿ) ಇತ್ಯಾದಿ ದೇವತೆಗಳನ್ನು ದೈವಿಗಳೆಂದು ನಂಬಿ ಪೂಜಿಸುವುದನ್ನು ನಾವಿಲ್ಲಿ ಗಮನಿಸಬಹುದು. ಕಾಡಿನ ಕ್ರೂರ ಪ್ರಾಣಿಗಳನ್ನು ಜನರಿಂದ ರಕ್ಷಿಸುವ ದೇವತೇಯೆ ಆಕೆ ಎಂಬುದು ಜನಪದರ ನಂಬಿಕೆಯಾಗಿದೆ.

ಪಶ್ಚಿಮ ಏಷ್ಯಾದ ಕೆಲವು ಪ್ರದೇಶಗಳಲ್ಲಿ ಸಿಕ್ಕಿರುವ ಮಣ್ಣಿನ ರಚನೆಗಳು ಕಂಚಿನ ಯುಗಕ್ಕೆ ಸಂಬಂಧಿಸಿದವೆಂದು ಹೇಳಲಾಗಿದೆ. ಕೈಗಳಿಂದ ಸ್ತನಗಳನ್ನು ಹಿಡಿದುಕೊಂಡಿರುವ ನಗ್ನವಾದ ಸ್ತ್ರೀಯರ ಈ ಪ್ರತಿಮೆಗಳು ಮಾತೃದೇವತಾ ಆರಾಧನೆಗೆ ಸಂಬಂಧಿಸಿದ್ದವೆಂದು ಭಾವಿಸಲಾಗಿದೆ. ಮಾತೃದೇವತೆಯು ಹಾಲನ್ನು ಕೊಡುವವಳಾಗಿ ಪೋಷಕಳಾಗಿ, ಇಲ್ಲಿ ಕಾಣಿಸಿಕೊಳ್ಳುತ್ತಾಳೆ, ಜಗತ್ತಿನಾದ್ಯಂತ ದೊರೆತಿರುವ ನಗ್ನವಾದ ಸ್ತ್ರೀ ವಿಗ್ರಹಗಳು ಕಂಚಿನಯುಗವೆಂದು ಭಾವಿಸಲಾಗಿದೆ. ಮೆಸಪೋಟೊಮಿಯಾ, ಪ್ರಾಚೀನ ಇರಾನ್ ಮತ್ತು ಗಂಗಾನದಿಯ ತೀರದವರೆಗೂ ಇವು ದೊರೆತಿವೆ. ನಗ್ನತೆಯು ಮಾತೃದೇವತೆಯ ಸಾರ್ವತ್ರಿಕ ಲಕ್ಷಣವಾಗಿದ್ದು ಈ ದೇವತೆಯ ಪಂಥ ಜಗತ್ತಿನಾದ್ಯಂತ ಜನಪ್ರೀಯವಾಗಿರುವುದನ್ನು ಗಮನಿಸಬಹುದು.[೧೨]

**ಏಷಿಯಾ ಖಂಡದಲ್ಲಿ ಮಾತೃದೇವತೆ**

ಏಷಿಯಾ ಖಂಡವು ನಾಗರೀಕತೆಯ ವಿಚಾರದಲ್ಲೂ ಆಫ್ರಿಕಾ ಮತ್ತು ಯೂರೋಪ್ ಖಂಡಗಳಷ್ಟೆ ಹಳೆಯದು. ಪ್ರಾಚೀನ ಕಾಲದಲ್ಲಿ ಇಲ್ಲಿ ಜನವಸತಿ ಇತ್ತು ಮತ್ತು ಇದು ಇತರ ಪ್ರದೇಶಗಳಿಗೆ ಹೋಲಿಸಿದರೆ ಬಹಳೇ ಮುಂದುವರಿದ ಜನಾಂಗವಾಗಿತ್ತು ಎಂಬುದನ್ನು ವಿದ್ವಾಂಸರು

---

೧೧. ಪ್ರೊ. ಬಿ.ವಿ. ವೀರಭದ್ರಪ್ಪ(ಸಂ): ದೇವರನ್ನು ಕುರಿತು ಒಂದು ಬಹು ಮುಖಿನೋಟ. ಪುಟ-೨೩೧ ಸಿದ್ದಲಿಂಗಯ್ಯನವರ ಲೇಖನ/ ಗ್ರಾಮದೇವತೆಯ ಪರಿಕಲ್ಪನೆ

೧೨. ಪ್ರೊ. ಬಿ.ವಿ. ವೀರಭದ್ರಪ್ಪ(ಸಂ): ದೇವರನ್ನು ಕುರಿತು ಒಂದು ಬಹು ಮುಖಿನೋಟ. ಪುಟ-೨೩೧ ಸಿದ್ದಲಿಂಗಯ್ಯನವರ ಲೇಖನ/ ಗ್ರಾಮದೇವತೆಯ ಪರಿಕಲ್ಪನೆ

ಒಪ್ಪಿಕೊಂಡಿದ್ದಾರೆ. ಗಂಗಾನದಿಯ ತಟದಲ್ಲಿ ಇರಾನ್ ಮತ್ತು ಇತರೆ ಪಶ್ಚಿಮ ಏಷ್ಯಾ ದೇಶಗಳಲ್ಲಿಯೂ ನಾಗರೀಕತೆ ಬೆಳೆದು ಬಂದಿರುವುದನ್ನು ನಾವು ಕಾಣುತ್ತೇವೆ. ಸಿಂಧೂ ನದಿ ಬಯಲು ಪ್ರದೇಶವು ಬಹು ಪ್ರಾಚೀನದಲ್ಲಿಯೇ ನಾಗರೀಕತೆಯು ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಅಂತಹ ಕಾಲದಲ್ಲಿಯೇ ನಮಗೆ ಈ ಪ್ರದೇಶಗಳಲ್ಲಿ ಮಾತೃದೇವತೆಯ ಆರಾಧನೆ ಪೋಷಣೆಯಲ್ಲಿದ್ದ ಕುರುಹುಗಳು ಕಂಡು ಬರುತ್ತವೆ.

ಸಿಂಧೂ ಕಣಿವೆಯ ನಾಗರೀಕತೆಯಲ್ಲಿ ಮಾತೃದೇವತೆಯ ಆರಾಧನೆ ವಿಫುಲವಾಗಿ ನಡೆಯುತ್ತಿದ್ದುದನ್ನು ಈಗ ಸಿಕ್ಕಿರುವ ಅನೇಕ ಸ್ತ್ರೀ ವಿಗ್ರಹಗಳು ಸೂಚಿಸುತ್ತವೆ. ಈ ಪ್ರತಿಮೆಗಳನ್ನು ಮುರ್ರೆ ಎಂಬ ವಿದ್ವಾಂಸರು ಮೂರು ಭಾಗ ಮಾಡಿದ್ದಾರೆ. ೧) ಇಷ್ಟಾರ್ ದೇವತೆಯ ರೀತಿಯಲ್ಲಿರುವ ದಿವ್ಯಸ್ತ್ರೀ ೨) ಇಸಿಸ್ ದೇವತೆಯ ರೀತಿಯಲ್ಲಿರುವ ದಿವ್ಯಸ್ತ್ರೀ(ಮಾತೆ) ೩) ಮಾನವೀಕೃತಗೊಂಡ ಯೋನಿ.

ದಿವ್ಯಸ್ತ್ರೀ ರೀತಿಯಲ್ಲಿರುವ ಪ್ರತಿಮೆಗಳು ಸಿಂದೂ ನದಿಯ ಕಣಿವೆಯಲ್ಲಿ ಯಥೇಚ್ಛವಾಗಿ ಸಿಕ್ಕಿವೆ. ಈ ಪ್ರತಿಮೆಗಳ ದೇಹದ ಮೇಲುಭಾಗವು ನಗ್ನವಾಗಿವೆ. ದಿವ್ಯ ಮಾತೆಯ ವಿಗ್ರಹಗಳು ಮಗುವಿಗೆ ಹಾಲೂಡಿಸುವಂತಿವೆ. ಇವುಗಳು ಸಿಕ್ಕಿರುವ ಪ್ರಮಾಣ, ಕಡಿಮೆ ಈ ಬಗೆಯ ವಿಗ್ರಹಗಳು ಮಹೆಂಜೋದಾರೋ ಮತ್ತು ಹರಪ್ಪ ಸಂಸ್ಕೃತಿಯಲ್ಲಿ ವಿಫುಲವಾಗಿದ್ದವು ಪ್ರತಿ ಮನೆಯಲ್ಲೂ ಬೀದಿಗಳಲ್ಲೂ ಇದ್ದವೆಂದು ಹೇಳಲಾಗಿದೆ. ಗ್ರಾಮದ ಸಂರಕ್ಷಣೆಗೂ ಮಕ್ಕಳ ಜನನಕ್ಕೂ ನಿತ್ಯ ಅಗತ್ಯಗಳಿಗೂ ಇವು ಆಸರೆಯಾಗಿದ್ದವು. ಸಿಂದೂ ನಾಗರೀಕತೆಯಲ್ಲಿ ತಾಯಿ ಮತ್ತು ಮಗುವಿನ ಚಿತ್ರ ಇರುವುದನ್ನು ಈಜಿಪ್ಟನ್ ಇಸಿಸ್ ದೇವತೆ ಮತ್ತು ಹೊರಸ್‌ನ ಚಿತ್ರದ ಜೊತೆಗೆ ಹೋಲಿಸಲಾಗಿದೆ. ಈ ಗಂಡು ದೇವತೆಯನ್ನು ಉಪದೇವತೆ ಎನ್ನಬಹುದು. ಆರಂಭದಲ್ಲಿ ಮಾತೃದೇವತೆ ಒಂದೇ ಇದ್ದು ಕಂಚಿನ ಯುಗದಲ್ಲಿ ಈ ದೇವತೆಯ ಜೊತೆಗೆ ಅಧೀನ ದೇವತೆಯಾಗಿ ಪುರುಷ ದೇವತೆಯೊಂದನ್ನು ಸೃಷ್ಟಿಸಿರಬಹುದು ಎಂದು ಹೇಳಲಾಗಿದೆ.[೧೩]

ಹರಪ್ಪಾ ಮೆಹೆಂಜೋಧಾರೋ ಮುಂತಾದ ಪ್ರದೇಶಗಳಲ್ಲಿ ದೊರಕಿರುವ ಹಲವಾರು ಶಿಲ್ಪಗಳಲ್ಲಿ ಮಾತೃದೇವತೆಯ ಶಿಲ್ಪಗಳೂ ಸೇರಿವೆ. ಇವುಗಳು ಬೇರೆ ಬೇರೆ ಸಂದರ್ಭದಲ್ಲಿ ರಚಿತವಾಗಿದ್ದು ಎಲ್ಲವೂ ಒಂದಕ್ಕಿಂತ ಒಂದು ಭಿನ್ನವಾಗಿವೆ. ಒಂದು ಶಿಲ್ಪವು ಟೆರ್ರಾಕೂಟಾದಲ್ಲಿ

---

೧೩. ಪ್ರೊ. ಬಿ.ವಿ. ವೀರಭದ್ರಪ್ಪ(ಸಂ): ದೇವರನ್ನು ಕುರಿತು ಒಂದು ಬಹುಮುಖಿ ನೋಟ. ಪುಟ-೨೩೨ ಸಿದ್ದಲಿಂಗಯ್ಯನವರ ಲೇಖನ/ ಗ್ರಾಮದೇವತೆಯ ಪರಿಕಲ್ಪನೆ

ರಚಿಸಿದ್ದು ಸಣ್ಣದಾಗಿದ್ದು ನಿಂತ ಭಂಗಿಯಲ್ಲಿದೆ. ಇತಿಹಾಸ ಪೂರ್ವ ಕಾಲದ ಈ ಮಾತೃದೇವತೆಯ ಶಿಲ್ಪದಲ್ಲಿ ತಲೆಯ ಮೇಲೆ ಮರದ ಟೊಂಗೆಗಳನ್ನು ಮತ್ತು ಎಲೆಗಳನ್ನು ಹೋಲುವಂತೆ ರಚಿಸಿದ್ದು ಸಸ್ಯ ಶ್ಯಾಮಲೆ ಎಂದು ನಾವು ಹೇಳುವ ಶಾಖಾಂಭರಿ ಇರಬಹುದೇನೋ? ಅನ್ನಿಸುತ್ತದೆ. ವಿಶಾಲವಾದ ಕಣ್ಣುಗಳು ಚಾಚಿದ ಸರಳ ಕೈಗಳು, ದಪ್ಪವಾದ ಸೊಂಟದ ಭಾಗ, ತೊಡೆಗಳು, ದೊಡ್ಡದಾದ ಸ್ತನಗಳನ್ನು ಹೊಂದಿದ್ದು ಸ್ತ್ರೀತ್ವವನ್ನು ಸ್ಪಷ್ಟವಾಗಿ ವ್ಯಕ್ತಪಡಿಸುತ್ತದೆ.

ಹರಪ್ಪ ಮಹೊಂಜೋದಾರೋದ ಅಗೆತಗಳಲ್ಲಿ ಸ್ತ್ರೀ ವಿಗ್ರಹಗಳು ದೊರೆತಿದ್ದು ಅವುಗಳಲ್ಲಿ ಇನ್ನೊಂದು ಮುಖ್ಯವಾದ ಶಿಲ್ಪವು ಇಲ್ಲಿದೆ. ಸ್ತ್ರೀಯೊಬ್ಬಳ ಯೋನಿಯಿಂದ ಸಸಿಯೊಂದು ಹೊರಬರುವ ಚಿತ್ರವಿದೆ. ಇದು ಸ್ತ್ರೀಯನ್ನು ಸೃಷ್ಟಿಯ ಸಂಕೇತವಾಗಿ ನಗ್ನದೇವತೆಯ ಕಲ್ಪನೆಗೆ ಅವಕಾಶ ಒದಗಿಸುತ್ತದೆ ಎನ್ನುತ್ತಾರೆ.[೧೪] ಇಂತಹದೇ ಇನ್ನೊಂದು ಶಿಲ್ಪವನ್ನು ನಾವಿಲ್ಲಿ ಗಮನಿಸಬಹುದು. ಈ ಮುದ್ರಿಕೆಯಲ್ಲಿ ಒಂದು ಸ್ತ್ರೀ ವಿಗ್ರಹವಿದ್ದು ಆಕೆಯ ಗರ್ಭದಿಂದ ಒಂದು ಸಸ್ಯವು ಹುಟ್ಟುತ್ತಿರುವಂತೆ ಚಿತ್ರಿಸಲಾಗಿದೆ. ಇದರ ಇನ್ನೊಂದು ಬದಿಯಲ್ಲಿ ಸ್ತ್ರೀ ಪುರುಷರ ಚಿತ್ರಗಳಿವೆ ಒಬ್ಬ ಮನುಷ್ಯನು ನೇಗಿಲಿನಂಥ ಆಯುಧವನ್ನು ಹಿಡಿದಿದ್ದಾನೆ. ಈ ಚಿತ್ರದಲ್ಲಿರುವ ಮನುಷ್ಯ ಉಳುಮೆ ಮಾಡುವ ರೈತನೆಂದು ಭಾವಿಸಲಾಗಿದೆ. ಗರ್ಭದಿಂದ ಸಸ್ಯವು ಹೊಮ್ಮುತ್ತಿರುವ ಸ್ತ್ರೀ ಚಿತ್ರವನ್ನು ಮಾತೃದೇವತೆಯದೆಂದು ಹೇಳಲಾಗಿದೆ. ಈಕೆಯನ್ನು ಶಾಕಂಭರಿ ಎಂದು ಗುರುತಿಸುತ್ತಾರೆ.[೧೫] ಇದೇ ರೀತಿಯ ಇನ್ನೊಂದು ಶಿಲ್ಪವನ್ನು ನಾವಿಲ್ಲಿ ಗಮನಿಸಿದರೆ ತಪ್ಪಾಗಲಾರದು. ಇದು ಕೂಡಾ ಹರಪ್ಪಾದಲ್ಲೇ ದೊರಕಿರುವಂತಹದು ಈ ಚಿತ್ರ ಒಂದು ವೃಕ್ಷದ ಎರಡು ಕೊಂಬೆಗಳ ನಡುವೆ ಹೆಣ್ಣೊಬ್ಬಳು ನಿಂತಿದ್ದಾಳೆ. ಒಬ್ಬ ಭಕ್ತನು ಮರದ ಪಕ್ಕದಲ್ಲಿ ಬಾಗಿನಿಂತಿದ್ದಾನೆ. ಒಂದು ಮೇಕೆಯು ಭಕ್ತನಹಿಂದೆ ನಿಂತಿದೆ, ಇದರ ಕೆಳಭಾಗದಲ್ಲಿ ಏಳು ವಿಗ್ರಹಗಳನ್ನು ಕಾಣಬಹುದು. ಈ ಚಿತ್ರದ ಹೆಣ್ಣಿನ ವಿಗ್ರಹವನ್ನು ಮಾತೃದೇವತೆಯೆಂದು ಭಾವಿಸಲಾಗಿದೆ. ಏಳು ವಿಗ್ರಹಗಳು ಕಡಿಮೆ ದರ್ಜೆಯ ಏಳು ದೇವತೆಗಳೆಂದು ಭಾವಿಸಬಹುದು. ಏಳು ದೇವತೆಗಳು ಮುಂದೆ ಬೆಳೆದ ಸಪ್ತ ಮಾತೃಕೆಯರ ಕಲ್ಪನೆಕೊಟ್ಟಿರಬಹುದು. ಮೇಲಿನ ಮಾತೃದೇವತೆಯು ವೃಕ್ಷದೇವತೆಯೆಂದೂ ಅರಣ್ಯದ ತಾಯಿಯೆಂದೂ ಹೇಳಲಾಗಿದೆ. ಬಾಗಿರುವ ಮನುಷ್ಯ ಪೂಜಾರಿಯೆಂದು ಭಾವಿಸಲಾಗಿದೆ. ಇಲ್ಲಿರುವ ಮೇಕೆಗೆ ಮನುಷ್ಯನ ಮುಖವಿರುವುದರಿಂದ ಇದು ಬಲಿಗಾಗಿ ತಂದ ಪ್ರಾಣಿಯಲ್ಲವೆಂದು ವಿದ್ವಾಂಸರು ಭಾವಿಸುತ್ತಾರೆ. ವೃಕ್ಷ ದೇವತೆಗೂ ಮೇಕೆಗೂ ಇರುವ ಸಂಬಂಧ ಜಗತ್ತಿನ ಬೇರೆ, ಬೇರೆ ಪ್ರದೇಶಗಳಲ್ಲಿ

---

೧೪. ಪ್ರೋ.ಎನ್.ಚಂದ್ರಪ್ಪ : ಎಲ್ಲಮ್ಮ ಒಂದು ಜಾನಪದೀಯ ಅಧ್ಯಯನ, ಪುಟ-೪೬

೧೫. ಪ್ರೊ.ಬಿ.ವಿ. ವೀರಭದ್ರಪ್ಪ (ಸಂ): ದೇವರನ್ನು ಕುರಿತು ಒಂದು ಬಹುಮುಖ ನೋಟ, ಪುಟ-೨೩೩ ಸಿದ್ದಲಿಂಗಯ್ಯನವರ ಲೇಖನ/ ಗ್ರಾಮದೇವತೆಯ ಪರಿಕಲ್ಪನೆ

ಸಾಭಿತವಾಗಿರುವುದರಿಂದ ಅದು ಬಲಿಪಶುವಲ್ಲವೆಂದು ಹೇಳಲಾಗಿದೆ.

ಸಿಂಧೂ ಸಂಸ್ಕೃತಿಯಲ್ಲಿ ಮಾತೃದೇವತೆಯನ್ನು ಭೂಮಿಯ ತಾಯಿಯೆಂದೂ ಮಾನವರ ಜೊತೆಯೆಂದೂ ದೇವತೆಗಳ ತಾಯಿ ಎಂದು ಅರಣ್ಯ, ಪ್ರಾಣಿ, ಧಾನ್ಯ, ಪಕ್ಷಿ ಇವುಗಳ ಮಾತೃವೆಂದೂ ಪೂಜಿಸಲಾಗಿದೆ. ಸ್ತನ, ಗರ್ಭ, ಯೋನಿ, ಇವುಗಳನ್ನು ಮಾತೃದೇವತೆಯ ಸಂಕೇತಗಳೆಂದು ಅವರು ಭಾವಿಸಿದ್ದರು. ಈ ಮೂರು ಅಂಗಗಳು ಮೂರು ಮುಖ್ಯ ಚಟುವಟಿಕೆಗಳನ್ನು ಮಾಡುತ್ತವೆ. ಅವು ಪಾಲನೆ, ಧಾರಣೆ ಮತ್ತು ಸೃಷ್ಟಿ, ಸಿಂದೂ ಸಂಸ್ಕೃತಿಯಲ್ಲಿ ದೊರೆತಿರುವ ಉಗ್ರಾಕಾರದ ಕಲ್ಲುಗಳನ್ನು ಮಾತೃದೇವತೆಯ ಸೃಷ್ಟಿಯ ಅಂಗವಾದ ಯೋನಿ ಎಂದು ಭಾವಿಸಲಾಗಿದೆ.[೧೬]

ಭಾರತ ಉಪಖಂಡದ ಇತಿಹಾಸವನ್ನು ನೋಡಿದರೆ ಈ ರೀತಿಯ ಹಲವಾರು ಶಿಲ್ಪಗಳು ಮುದ್ರೆಗಳು ಭಾರತ ಉಪಖಂಡದ ಎಲ್ಲೆಡೆ ಸಾಕಷ್ಟು ದೊರೆತಿವೆ. ಇವುಗಳಲ್ಲಿ ಬಹಳಷ್ಟು ಶಿಲ್ಪಗಳು ಮಾತೃದೇವತೆಯ ಕುರಿತೂ ಇವೆ. ಇನ್ನು ಹೇಳಬಹುದಾದರೆ ಭಾರತೀಯ ಉಪಖಂಡವು ಜಗತ್ತಿನ ಹಲವಾರು ದೇಶಗಳಿಗಿಂತ ಬಹಳಷ್ಟು ಮುಂದುವರಿದುದ್ದಾಗಿತ್ತು. ಭಾರತದಲ್ಲಿ ಹೊತ್ತು ನೆತ್ತಿಗೆ ಬಂದಾಗ ಲೋಕದ ಹಲವು ಜಾಗೆಗಳಲ್ಲಿ ಇನ್ನೂ ಕತ್ತಲಿತ್ತು.[೧೭] ಇದು ಬಹಳ ಅರ್ಥಗರ್ಭಿತವಾದ ಮಾತು ನಾಗರೀಕ ಸಮಾಜದಲ್ಲಿ ಹಲವಾರು ಧರ್ಮಗಳ ವಿವಿಧ ಪಂಥಗಳ ಉದಯಕ್ಕೆ ಕಾರಣವಾಯಿತು. ಇದಕ್ಕೆ ವೇದಗಳು ಉಪನಿಷತ್ತುಗಳು, ಪುರಾಣಗಳು, ಜೈನ, ಭೌದ್ಧ, ಶೈವ, ವೈಷ್ಣವ, ಇತ್ಯಾದಿ ಧರ್ಮಗಳು ಸಾಕಷ್ಟು ಕೊಡುಗೆ ನೀಡಿದವು.

**ಭಾರತೀಯ ನಂಬಿಕೆಯಲ್ಲಿ ಮಾತೃದೇವತೆ ಆರಾಧನೆ.**

ಹೆಣ್ಣು ಮಾನವ ಜನಾಂಗದ ಸಂಕೇತವಷ್ಟೇ ಅಲ್ಲ ಜೀವೋತ್ಪಾದನೆಯ ಸೃಷ್ಟಿಯ ಮೂಲಕೇಂದ್ರವಾಗಿದ್ದಾಳೆ. ಆಕೆಯ ಪ್ರತಿಯೊಂದು ಅಂಗವೂ ಸೃಷ್ಟಿ ಮತ್ತು ಪಾಲನೆಯ ಸಾಮರ್ಥ್ಯವನ್ನು ಪಡೆದು ವ್ಯಾಪಕತೆಯನ್ನು ಹೊಂದಿದೆ. ಆಕೆಯ ಶರೀರವನ್ನು ಚೈತನ್ಯ ಶಕ್ತಿಯ ಸಂಕೇತಗಳೆಂದು ತಿಳಿಯಲಾಯಿತು. ಸಮಾಜದ ಬೆಳವಣಿಗೆಯ ಮೊದಲ ಹಂತದಲ್ಲಿ ಮಾತೃವೇ

---

೧೬. ಪ್ರೊ. ಬಿ.ವಿ. ವೀರಭದ್ರಪ್ಪ (ಸಂ): ದೇವರನ್ನು ಕುರಿತು ಒಂದು ಬಹುಮುಖ ನೋಟ, ಪುಟ-೨೩೨ ಸಿದ್ದಲಿಂಗಯ್ಯನವರ ಲೇಖನ/ ಗ್ರಾಮದೇವತೆಯ ಪರಿಕಲ್ಪನೆ

೧೭. ಸತ್ಯಕಾಮ: ತಂತ್ರಯೋನಿ ಪುಟ-೨೪

ಧರ್ಮದ ಕೇಂದ್ರ ಸ್ಥಾನದಲ್ಲಿದ್ದಳು. ಆಹಾರ ಉತ್ಪಾದನೆ ಮತ್ತು ಸಂಗ್ರಹಣೆ ಸ್ತ್ರೀಯು ಕರ್ತವ್ಯವಾಗಿತ್ತು. ಆ ಮೂಲಕ ಪೋಷಕಳೂ ಆಗಿದ್ದಾಳೆ. ಇದರಿಂದಾಗಿ ಸಮಾಜದಲ್ಲಿ ಸ್ತ್ರೀಯು ಸ್ಥಾನ ಮಾನ ಹೆಚ್ಚಿತ್ತು. ಈ ಮಾನ್ಯತೆ ಅವಳನ್ನು ದೈವತ್ವಕ್ಕೇರಿಸುವವರಿಗೆ ಹೋಯಿತು. ಮಾತೃಪ್ರಧಾನ, ವ್ಯವಸ್ಥೆಯು ಪ್ರಪಂಚದ ಯಾವುದೇ ಭಾಗಕ್ಕಿಂತ ಗುಣ ಮತ್ತು ಪ್ರಮಾಣದಲ್ಲಿ ಭಾರತ ದೇಶದಲ್ಲಿ ವಿಫುಲವಾಗಿತ್ತೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಭಾರತದಲ್ಲಿ ಈ ಸ್ತ್ರೀ ಮಾನ್ಯತೆಯು ಕಥೆಯ ಆರಂಭದ ಹಂತದೊಡನೆ ಸಂಬಂಧ ಹೊಂದಿದೆ ವೇದ ಪೂರ್ವಕಾಲದ ಜನರ ಆರ್ಥಿಕ ಚಟುವಟಿಕೆಯು ಕೃಷಿಯಾಗಿತ್ತು. ಕೃಷಿಯು ಆರ್ಥಿಕ ಚಟುವಟಿಕೆಯಾಗಿದ್ದು ವಿಶ್ವದ ಎಲ್ಲ ಜನಾಂಗಗಳಲ್ಲಿ ಮಾತೃದೇವತೆಯು ಅಗ್ರಮಾನ್ಯಳಾದಂಥ ಧಾರ್ಮಿಕ ಪಂಥಗಳು ಸೃಷ್ಟಿಯಾದವು. ಭಾರತದಲ್ಲಿ ಶಾಕ್ತ ಪಂಥದ ಉದಯಕ್ಕೆ ಕಾರಣವಾದಂತಹ ಸಾಂಸ್ಕೃತಿಕ ಮತ್ತು ಚಾರಿತ್ರಿಕ ಅಂಶಗಳೇ ವಿವಿಧ ದೇಶಗಳ ಸಮೃದ್ಧಿ ಪಂಥಗಳ ಹುಟ್ಟಿಗೆ ಕಾರಣವಾಗಿವೆ ಎನ್ನಬಹುದು. ಏಕೆಂದರೆ ಶಾಕ್ತ ಆಚಾರಗಳು ಪ್ರಧಾನವಾಗಿ ಕೃಷಿಯು ಉತ್ಪನ್ನಗಳ ಸಮೃದ್ಧಿಗಾಗಿ ಹುಟ್ಟಿಕೊಂಡಿವೆ. ಈ ಸಾಂಸ್ಕೃತಿಕ ಹಂತದಲ್ಲಿ ಆ ಸ್ತ್ರೀಯು ಹಕ್ಕು ಒಡೆತನಕ್ಕೆ ಒಳಪಟ್ಟಿದ್ದು ಕುಟುಂಬದ ತಲೆ ಮಾರುಗಳು ಹೆಣ್ಣಿನ ಕಡೆಯಿಂದಲೇ ಗುರುತಿಸಲ್ಪಡುತ್ತಿದ್ದವು.[೧೮]

ಮಾತೃದೇವತೆಯ ಪೂಜೆಯ ಹಿನ್ನೆಲೆಯಲ್ಲಿ ಕಂಡು ಬರುವುದು ಮುಖ್ಯವಾಗಿ ಯೋನಿ, ಸ್ತನ, ಇತ್ಯಾದಿಗಳು ಇವು ಮುಖ್ಯವಾಗಿ ಸೂಚಿಸುವುದು ಸೃಷ್ಟಿ ಮತ್ತು ಪಾಲನೆ ಕ್ರಿಯೆ ಎಂಬುದು ಎಲ್ಲರಿಗೂ ತಿಳಿದಿರುವ ಅಂಶ, ಸಿಂಧೂ ನದೀ ಬಯಲಿನಲ್ಲಿ ದೊರೆತ ಮಾತೃದೇವತೆಯ ಶಿಲ್ಪಗಳಲ್ಲಿ ಬೃಹತ್‌ಗಾತ್ರದ ಸ್ತನಗಳು ಅಗಲವಾದ ಸೊಂಟ ಗಮನಿಸಬಹುದಾದ, ಯೋನಿಭಾಗ, ತೀರ ಸಣ್ಣದಾದ ತಲೆ, ಇತ್ಯಾದಿಗಳನ್ನು ಗಮನಿಸಬೇಕಾಗಿದೆ. ಇವು ಸಾಮಾನ್ಯವಾಗಿ ನಿಂತಿರುವ ಶಿಲ್ಪಗಳು ಅಂದರೆ ಈ ಭಾಗಗಳನ್ನು ವಿವರವಾಗಿ ಕಾಣುವಂತೆ ಚಿತ್ರಿಸಿರುವಂತಹವುಗಳು ಆಕಾರದಲ್ಲಿ ಸಣ್ಣದಾಗಿರುವ ಈ ಶಿಲ್ಪಗಳು ತಮ್ಮ ಸರಳತೆ ಮತ್ತು ಸಹಜತೆಯಿಂದ ಗಮನ ಸೆಳೆಯುತ್ತದೆ.

ಹೆಣ್ಣಿನ ಗರ್ಭಧಾರಣಾ ಕ್ರಿಯೆ ಭೂಮಿಯಲ್ಲಿ ಹಾಕುವ ಬೀಜವು ಗಿಡವಾಗಿ ಮರವಾಗುವುದು ಮತ್ತೆ ಹಣ್ಣನ್ನು ಉದುರಿಸಿ ಬೀಜ ಧಾರಣಾಕ್ರಿಯೆ ಇವೆರಡಕ್ಕೂ ಅಂದಿನ ಮಾನವ ಸಾಮ್ಯತೆಯನ್ನು ಕಂಡಿದ್ದರೆ ಆಶ್ಚರ್ಯವಿಲ್ಲ. ಹೀಗಾಗಿ ಆತನು ಹೆಣ್ಣನ್ನು ಹಾಗೂ

---

೧೮. ಮೊಗಳ್ಳಿ ಗಣೇಶ (ಸಂ): ದಲಿತ ಚಿಂತನೆ, ಪುಟ-೯೪ ಸಿದ್ದಲಿಂಗಯ್ಯನವರ ಲೇಖನ/ ಗ್ರಾಮದೇವತೆಯ ಪರಿಕಲ್ಪನೆ

ಪ್ರಕೃತಿಯನ್ನು ದೇವರೆಂದೂ, ಇನ್ನೂ ಒಂದು ಹೆಜ್ಜೆ ಮುಂದಕ್ಕೆ ಹೋಗಿ ಹೆಣ್ಣನ್ನು (ತಾಯಿ) ಪ್ರತ್ಯಕ್ಷ ದೇವತೆಯೆಂದು ನಂಬಿದ್ದಾನೆ. ಅಂದಿನ ಕಾಲದ ಪುರಷನು ಸಂಪೂರ್ಣವಾಗಿ ಹೆಣ್ಣು ಪ್ರಮುಖಳಾಗಿದ್ದರಿಂದ ಆಕೆಯ ಪ್ರತಿರೂಪವನ್ನು ತನ್ನ ಕುಶಲತೆ ಹಾಗೂ ಬುದ್ಧಿವಂತಿಕೆಯನ್ನು ಉಳಿಸಿ ಸಂಜ್ಞಾರ್ಥಕವಾಗಿ ಶಿಲ್ಪಗಳನ್ನು ರಚಿಸಿದ್ದರಬಹುದು. ಆದುದರಿಂದ ಮುಖವಾಗಲಿ ತಲೆಯಾಗಲೀ ಮುಖ್ಯವಾಗಿರಲಿಲ್ಲ.

ಈ ರೀತಿಯಲ್ಲಿ ಪಂಚಭೂತಗಳನ್ನು ಆರಾಧಿಸುತ್ತಿದ್ದ ಮನುಷ್ಯ ಮುಂದುವರಿದು ಪ್ರತ್ಯಕ್ಷವಾಗಿರುವ ಮಾತೆಯನ್ನೇ ಪೂಜಿಸಲು ಆರಂಭಿಸಿದನೆನ್ನಬಹುದು. ಈ ಆರಾಧನೆಯೇ ಮುಂದೆ ಹಲವಾರು ಧರ್ಮಗಳ ಪಂಥಗಳ ಹುಟ್ಟಿಗೆ ಕಾರಣವಾಯಿತು. ಒಂದೆಡೆ ಪಂಚ ಭೂತಗಳನ್ನು, ಇಂದ್ರನನ್ನು ಇತರ ದೇವತೆಗಳನ್ನು ಆರಾಧಿಸುವ ಗುಂಪು ಹೀಗೆ ಪ್ರಾರಂಭವಾಯಿತೆನ್ನಬಹುದು. ಏಕೆಂದರೆ ಎಲ್ಲಾ ಕಾಲದಲ್ಲಿಯೂ ಅಭಿಪ್ರಾಯ ಸ್ವಾತಂತ್ರ್ಯವಿದ್ದು ಮನುಷ್ಯ ತನಗೆ ಇಚ್ಛೆ ಇರುವುದನ್ನು ವ್ಯಕ್ತ ಪಡಿಸುವುದಕ್ಕೂ ತನ್ನ ದಾರಿಯಲ್ಲಿಯೇ (ತಾನು, ನಂಬಿದ) ನಡೆಯುವುದಕ್ಕೂ ಸ್ವಾತಂತ್ರ್ಯ ಇತ್ತು. ಹೀಗೆ ಹುಟ್ಟಿಕೊಂಡ ಪಂಥಗಳಲ್ಲಿ ಶಾಕ್ತ ಪಂಥವು ಬಹುಮುಖ್ಯವಾದ ಒಂದು ಪಂಥವಾಗಿ ಬೆಳೆದು ಬರಲು ಕಾರಣವಾಯಿತು.

**ಶಾಕ್ತ ಪಂಥ**

ಶಾಕ್ತ ಪಂಥವು ಭಾರತ ಉಪಖಂಡದಲ್ಲಿ ಬೆಳೆದುಬಂದ ಪಂಥಗಳಲ್ಲಿಯೇ ಬಹುಶಃ ಅತ್ಯಂತ ಪ್ರಾಚೀನವಾದುದು. ವೇದಗಳ ನಂತರದ ಕಾಲದಲ್ಲಿ ಎರಡು ಪ್ರಮುಖ ಪಂಥಗಳು ವ್ಯಾಪಕ ಬೆಳವಣಿಗೆ ಹೊಂದಿದವು. ಮೊದಲನೆಯದು ಶಾಕ್ತ ಪಂಥವಾದರೆ, ಎರಡನೆಯದು ಶೈವ ಪಂಥ. ಶಾಕ್ತ ಪಂಥವು ಶಕ್ತಿಯನ್ನು ಕೇಂದ್ರವಾಗಿ ಹೊಂದಿದ್ದರೆ ಶೈವ ಪಂಥವು ಶಿವನನ್ನು ಕೇಂದ್ರವಾಗಿ ಹೊಂದಿದೆ. ಇಲ್ಲಿ ಶಿವ ಅಥವಾ ಶಕ್ತಿ ಎಂಬುದು ದೈವತ್ವಕ್ಕಿಂತ ಹೆಚ್ಚಾಗಿ ಪ್ರಕೃತಿ ಮತ್ತು ಪುರುಷ ಎಂಬ ಅರ್ಥವನ್ನು ಹೊಂದಿದೆ. ಪ್ರಕೃತಿಯನ್ನು ಹೆಣ್ಣಿನ ಮೂಲಕ ಗುರುತಿಸಿದರೆ ಪುರುಷ ಎಂದರೆ ಶಿವ ಮತ್ತು ಲಿಂಗದ ಮೂಲಕ ಗುರುತಿಸಲ್ಪಟ್ಟಿತು. ಈ ಹಿನ್ನೆಲೆಯನ್ನು ಶಿವನನ್ನು ಲಿಂಗವೆಂದೂ ಶಕ್ತಿಯನ್ನು ಯೋನಿ ಎಂದೂ ಪೂಜಿಸುವ ಸಂಪ್ರದಾಯ ಬೆಳೆದು ಬಂತು. ಬಹುಶಃ ಕಾಲಕ್ರಮೇಣ, ಪುರುಷ ಮೇಲುಗೈ ಪಡೆದಾಗ ಅಥವಾ ಲಿಂಗ ಪೂಜೆಯೇ ಮಹತ್ವ ಪಡೆದು ಯೋನಿ ಪೂಜೆಯು ಮಡಿವಂತರಿಗೆ ಅಸಹ್ಯವೆನಿಸಿ ಸಮಾಜದ ಮುಖ್ಯಸ್ಥರಿಂದ ಅದು ದೂರವಾಗಿರಬಹುದು. ಆದರೆ ಪ್ರಾಚೀನ ಭಾರತದಲ್ಲಿ ಅಂತಹ ಸ್ಥಿತಿ ಇರಲಿಲ್ಲವಾದುದರಿಂದ

ಅಂದಿನ ಕಾಲದಲ್ಲಿ ಈ ರೀತಿಯ ಕಿತ್ತಾಟ ವಿರಲಿಲ್ಲವಾಗಿ ಶಾಕ್ತ ಪಂಥವು ಒಂದು ಧರ್ಮವಾಗಿ ಬೆಳವಣಿಗೆ ಹೊಂದಿರಬೇಕು.

ಹೆಣ್ಣಿನ ಗರ್ಭಧಾರಣೆ ಮತ್ತು ಭೂಮಿಯ ಸಸ್ಯಧಾರಣೆ ಇವೆರಡಕ್ಕೂ ಸಾಮ್ಯತೆ ಕಂಡುಕೊಂಡ ಆದಿಮಾನವ ಹೆಣ್ಣು ಮತ್ತು ಭೂಮಿ ಇವೆರಡೂ ಪೂಜ್ಯ ವಸ್ತುಗಳೆಂದು ಭಾವಿಸಿದ ಸಮೃದ್ಧಿಯ ಆಚರಣೆಯಾಗಿ ಮಾಟ ರೂಪಗೊಂಡಿತು. ಇದರ ಮುಂದುವರೆದ ರೂಪವೇ ಶಾಕ್ತ ಪಂಥ. ಪ್ರಪಂಚದ ಯಾವುದೇ ಸಂಸ್ಕೃತಿಯಲ್ಲಿ ಕೃಷಿಯ ಆರಂಭಕಾಲದಲ್ಲಿ ಹುಟ್ಟಿದ ಈ ಧರ್ಮವು ಒಂದೇ ಮೂಲ ಆಶಯವನ್ನು ಹೊಂದಿದ್ದು ಆಯಾ ಪ್ರದೇಶಕ್ಕೆ ಅನುಗುಣವಾಗಿ ವೈಲಕ್ಷಣಗಳನ್ನು ಹೊಂದಿರುತ್ತದೆ. ಕೃಷಿಯ ಆರಂಭ ಚರಿತ್ರೆಯಲ್ಲಿ ಹೆಣ್ಣಿನ ಸ್ಥಾನ ಮಾನಗಳನ್ನು ಗಮನಾರ್ಹವಾಗಿ ಬದಲಾವಣೆ ಮಾಡಿತಲ್ಲದೇ ಅನೇಕ ಸ್ತ್ರೀ ದೇವತೆಗಳ ಹುಟ್ಟಿಗೆ ಕಾರಣವಾಯಿತು. ಈಗಾಗಲೇ ಇದ್ದ ಸ್ತ್ರಿ ದೇವತೆಗಳು ಪೂರ್ವರ್ಧಮಾನಕ್ಕೆ ಬರಲು ಪೂರಕವಾಯಿತು. ಸ್ತ್ರೀಯನ್ನು ಕುರಿತು ಪೂಜ್ಯ ಭಾವನೆಯ ಜೊತೆಗೆ ಪ್ರಪಂಚದ ಎಲ್ಲ ದೇವರುಗಳು ಶಕ್ತಿಯಿಂದ ಸೃಷ್ಟಿಯಾದವು ಎಂಬ ನಂಬಿಕೆ ಬೆಳೆಯ ತೊಡಗಿತು. ಜಗದಂಬೆ, ಜಗನ್ಮಾತೆ ಈ ಪರಿಕಲ್ಪನೆಗಳು ಜನಮನದಲ್ಲಿ ಗಟ್ಟಿಯಾದವು. ಶಕ್ತಿಯು ಚಿರಕನ್ಯೆಯೆಂದೂ ಗರ್ಭ ಧರಿಸದೆಯೇ ದೇವರುಗಳನ್ನು ಜನಸಮುದಾಯಗಳನ್ನು ಸೃಷ್ಟಿಸಿದಳೆಂದೂ ಪುರಾಣ ಕಥೆಗಳು ಹುಟ್ಟಿಕೊಂಡವು ಅನೇಕ ಸಂಸ್ಕೃತಿಗಳಲ್ಲಿ ಸ್ತ್ರೀ ದೇವತೆ ತನ್ನ ಗಂಡನಾಗುವವನನ್ನು ಸೃಷ್ಟಿಸಿದವಳಾಗಿದ್ದಾಳೆ....[೧೯] ಈ ಮೇಲಿನ ಮಾತುಗಳಲ್ಲಿ ನಾವು ದೇಶದಲ್ಲಿ ಶಾಕ್ತ ಪಂಥವು ಬೆಳೆದು ಬರಲು ಕಾರಣವಾದ ಹಿನ್ನೆಲೆಗಳನ್ನು ಗಮನಿಸಬಹುದು.

ಶಾಕ್ತ ಪಂಥವು ಬೆಳೆದು ಬರಲು ಶಕ್ತಿಯ ಮೇಲಿನ ನಂಬಿಕೆಯೇ ಕಾರಣವಾಯಿತು. ಇದು ಮುಂದೆ ಹಲವಾರು ಹಂತಗಳನ್ನು ದಾಟಿ, ಹಲವಾರು ಕವಲುಗಳನ್ನು ಪಡೆದಿರುವುದನ್ನು ಕಾಣಬಹುದಾಗಿದೆ. ಇವುಗಳಲ್ಲಿ ತಾಂತ್ರಿಕ ಪಂಥಗಳು ಎಂದು ಹೇಳುವ ಕೌಲ (ಶಾಕ್ತ) ಶೈವ, ಕಾಳಾಮುಖ, ಕಾಪಾಲಿಕ, ಗಾಣಪತ್ಯ, ನಾಗ, ಲಿಫೋಡಿ, ಆನಂಧಮಾರ್ಗ ಇತ್ಯಾದಿ ಇವುಗಳ ಜೊತೆಗೆ ಭೌದ್ಧಧರ್ಮದ ವಜ್ರಯಾನವೂ ಸೇರಿಕೊಂಡಿದೆ. ಇವುಗಳಲ್ಲಿ ಕೌಲ ಮತ್ತು ಶಾಕ್ತ ಪಂಥವು ನಮ್ಮ ಅಧ್ಯಯನ ದೃಷ್ಟಿಯಿಂದ ಮುಖ್ಯವಾಗಿದೆ. ಇದು ಮೊದಲೇ ಹೇಳಿದಂತೆ ಕಾಳಿಯನ್ನು ಕುರಿತಾದ ಪಂಥ. ಕಾಳಿಯು ಆದಿ ಮಾತೆಯೂ ಹೌದು ಶಿವನ ಪತ್ನಿಯೂ

೧೯. ಮೊಗಳ್ಳಿ ಗಣೇಶ (ಸಂ): ದಲಿತ ಚಿಂತನೆ, ಪುಟ-೯೫ ಸಿದ್ದಲಿಂಗಯ್ಯನವರ ಲೇಖನ/ ಗ್ರಾಮದೇವತೆಯ ಪರಿಕಲ್ಪನೆ

ಹೌದು ಆದುದರಿಂದಲೇ ಆಕೆಯನ್ನು ಶಕ್ತಿಯೆಂದು ನಂಬಿ ಪೂಜಿಸುವ ಪರಂಪರೆ ಬೆಳೆದು ಬಂತು. ಹೀಗೆ ಬೆಳೆದು ಬಂದ ಶಾಕ್ತಪಂಥದಲ್ಲಿ ತಂತ್ರಾಚಾರ ಎಂಬ ಒಂದು ಆಚರಣೆ ಮಹತ್ವ ಪಡೆಯಿತು. ತಂತ್ರ ಎಂಬ ಮಾತು ಈ ಸಂದರ್ಭದಲ್ಲಿ ಹೆಚ್ಚು ಮಹತ್ವ ಪಡೆಯಿತು ಶಾಕ್ತ ಪಂಥ ಮತ್ತು ತಂತ್ರ ಮಾರ್ಗ ಎಂಬುದು ಒಂದೇ ಎನ್ನುವಷ್ಟರ ಮಟ್ಟಿಗೆ ಶಾಕ್ತ ಪಂಥವು ತಂತ್ರ ಮಾರ್ಗವನ್ನು ಅಪ್ಪಿಕೊಂಡಿತು. ಆದರೆ ಶಾಕ್ತ ಪಂಥವು ತಂತ್ರದ ಮತ್ತು ತಾಂತ್ರಿಕ ಪಂಥದ ಒಂದು ಪಂಥವಾಗಿ ಅಥವಾ ತಂತ್ರಮಾರ್ಗದಲ್ಲಿ ನಡೆಯುವ ಒಂದು ಗುಂಪಾಗಿಯೇ ಬೆಳೆದು ಬಂದಿದೆ.

**ಕರ್ನಾಟಕದಲ್ಲಿ ಶಕ್ತಿ ಪೂಜೆ**

ಶಕ್ತಿ (ಶಿವ) ಪೂಜಕರು ಶಾಕ್ತರು ಇಲ್ಲಿ ಸ್ವತ ಶಿವನೇ ಶಿವೆಯನ್ನು ಪೂಜಿಸುವನು. ಇದರಲ್ಲಿ ದಕ್ಷಿಣಮಾರ್ಗಿ ಮತ್ತು ವಾಮಮಾರ್ಗಿ ಎಂಬ ಎರಡು ಭಾಗಗಳಿವೆ. ದಕ್ಷಿಣ ಮಾರ್ಗಿಯರಿಗೆ ಬಲಗೈ ಪೂಜಕರು ಮತ್ತು ಬಹಿರಂಗ ಪೂಜಕರು ಎಂದೂ ವಾಮಮಾರ್ಗಿಗಳಿಗೆ ಎಡಗೈ ಪೂಜಕರು ಮತ್ತು ಗುಪ್ತ ಪೂಜಕರು ಎಂದೂ ಕರೆಯುತ್ತಾರೆ. ಇವರಲ್ಲಿ ಚಕ್ರಪೂಜೆ ಪಂಚ, ಮಕಾರದ ಅನುಸರಣೆ, ಇವೆ ಇವರು ಬೆತ್ತಲೆ ಹೆಣ್ಣನ್ನು (ಲಜ್ಜಾ ಗೌರಿ-ಬೆತ್ತಲೇ ಗೌರಿ) ಪೂಜಿಸುವರು. ಈ ಶಾಕ್ತರು ತಮ್ಮನ್ನು ವೀರರೆಂದೂ ಇತರರನ್ನು ಪಶುಗಳೆಂದು ಭಾವಿಸುವರು. ಇವರು ಜಾತಿಯನ್ನು ಮನ್ನಿಸುವುದಿಲ್ಲ.[20] ಇವರು ಆಗಿನ ಕಾಲದಲ್ಲಿ ಹೆಚ್ಚಾಗಿ ಪ್ರಚಲಿತವಾಗಿದ್ದರು ಇವರನ್ನು ಕೌಲರು ಎಂದೂ ಗುರುತಿಸುವುದಿದೆ. ಇದಕ್ಕೆ ಕಾರಣ ಕಾಳಿಯನ್ನು ಶಕ್ತಿಯು ರೂಪವಾಗಿನಂಬಿ ಪೂಜಿಸುವುದು ಕಾಳಿಯ ಉಗ್ರಸ್ವಭಾವವೇ ಇವರ ಸಾಧನೆಯ ಹೇತುವಾದು ದಾಗಿತ್ತು. ಕರ್ನಾಟಕದಲ್ಲಿ ಅಂದಿನ ಕಾಲದಲ್ಲಿ ಕೌಲರ ಪ್ರಭಾವ ಸಾಕಷ್ಟಿದ್ದಿತು.

ಕೌಳರು ಅಲೆಮಾರ್ಗಿಕ ತಾಂತ್ರಿಕರಾಗಿದ್ದರು ಅವರು. ಕರ್ನಾಟಕದಲ್ಲಿದ್ದರೆಂಬುದಕ್ಕೆ ಸಮಯ ಪರೀಕ್ಷೆ ಮತ್ತು ಯಶಸ್ವಿತೀಲಕ ಚಂಪುಕಾವ್ಯಗಳಲ್ಲಿ ಬರುವ ಉಕ್ತಿಗಳು ಸಾಕ್ಷಾಧಾರಗಳಾಗಿವೆ. ಬ್ರಹ್ಮ ಶಿವನಿಗೆ ಮತದ ಸಾಕ್ಷಾತ್ ಪರಿಚಯವಿದ್ದಿತು. ಆ ಕಾರಣ ಅವನು ಅದಕ್ಕೆ ಸಂಬಂಧಿಸಿದ ಅನೇಕ ಸಂಗತಿಗಳನ್ನು ಕೊಟ್ಟಿದ್ದಾನೆ. ಕೌಳರು ಚಂಡಿಯ ಭಕ್ತರಾಗಿದ್ದರು. ಅವರ ಪ್ರಕಾರ ಚಂಡಿಯೇ ಪರಮದೈವ ಬ್ರಹ್ಮ ವಿಷ್ಣು ಶಿವನೂ ಕೂಡ ಅವಳ ಆಧೀನದಲ್ಲಿರುವ ದೈವಗಳು: ಕೌಳಾಚಾರ್ಯರ ಮಾಂಸಾಹಾರ ಮಧ್ಯಪಾನುಗಳೇ ಮೋಕ್ಷವೆಂದೂ ನಂಬಿದ್ದರೆಂಬ ಬ್ರಹ್ಮಶಿವ ತೀರ ಕಟುವಾಗಿ ಖಂಡಿಸಿದ್ದಾರೆ. ಕೌಳರು ಭೋಜ್ಯ ಅಭೋಜ್ಯ ಪೇಯ, ಅಪೇಯ

೨೦. ಎಸ್.ಎಸ್. ಹಿರೇಮಠ : ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ, ಭಾಗ-೨ ಪುಟ-೨೭೫

ವೆಂಬ ಯಾವ ವ್ಯತ್ಯಾಸವನ್ನು ಇಟ್ಟುಕೊಂಡಿರಲಿಲ್ಲವೆಂದೂ ಸೋಮದೇವ ಹೇಳುತ್ತಾನೆ. ಕೌಳರಲ್ಲಿ ಎರಡು ಪಂಗಡಗಳಿದ್ದವು. ಉತ್ತರ ಕೌಳರು ಮತ್ತು ಪೂರ್ವಕೌಳರು ಇವು ಬಹುಶಃ ಈತ್ತಿಚಿನ ಮತ್ತು ಹಿಂದಿನ ಸಂಪ್ರದಾಯಗಳ್ನು ಸೂಚಿಸುವಂತೆ ಕಾಣುತ್ತದೆ. ಇವೆರಡರಲ್ಲಿ ಪೂರ್ವಕೌಳಕ್ಕಿಂತ ಉತ್ತರ ಕೌಳರು ಹೆಚ್ಚು ಬೀಭತ್ಸವಾಗಿದ್ದಿತು. ಪೂರ್ವಕೌಳದ ಸಾಧಕರು ಸ್ತ್ರೀಯ ಗುಹ್ಯಾಂಗದ ಚಿತ್ರವನ್ನು ಪೂಜಿಸಿದರೆ, ಉತ್ತರ ಕೌಳದ ಸಾಧಕರು ಗುಹ್ಯಾಂಗವನ್ನೇ ಪೂಜಿಸುತ್ತಿದ್ದರು. ಬ್ರಹ್ಮ ಶಿವನ ಪ್ರಕಾರ ಕರ್ನಾಟಕದಲ್ಲಿದ್ದುದ್ದು ಈ ಉತ್ತರ ಕೌಳವೇ ಶಂಕರ ದಾಸಿಮಯ್ಯನ ಪುರಾಣದಲ್ಲಿ (ಸು.ಕ್ರಿ.ಶ.೧೫-೧೬) ಈ ಪಂಥದ ವಿಸ್ತೃತ ಚಿತ್ರ ದೊರಕುತ್ತದೆ. ಈ ಕೃತಿಯ ಪ್ರಕಾರ, ಕೌಳರು ತಾವೇ ನಿಜವಾದ ಬ್ರಾಹ್ಮಣರೆಂದೂ ತಮಗೆ ಮಾತ್ರ ವೇದಗಳ ಅರ್ಥ ತಿಳಿದಿದೆ ಎಂದು ಭಾವಿಸಿದ್ದರು. ತಮ್ಮ ದೈವ ಮಹಾಕಾಳಿಗೆ ಪ್ರಾಣಿಗಳನ್ನು ಬಲಿಯಾಗಿ ಕೊಡುತ್ತಿದ್ದರು ತಮ್ಮ ಸಾಧನೆಯ ಅಂಗವಾಗಿ ಮಾಂಸವನ್ನು ತಿನ್ನುತ್ತಿದ್ದರು....[೨೧]

ಈ ಮೇಲಿನ ಮಾತುಗಳಲ್ಲಿ ನಾವು ತಂತ್ರಾಚಾರ್ಯರ ಬಗ್ಗೆ ಅದರಲ್ಲಿಯೂ ಕೌಳರ ಬಗ್ಗೆ ಹೇಳಿದ ಮಾತುಗಳನ್ನು ಗಮನಿಸಬಹುದು. ಮುಖ್ಯವಾಗಿ ಲಜ್ಜಾಗೌರಿಯ ಪ್ರಸ್ತಾಪವನ್ನು ಗಮನಿಸಬಹುದಾಗಿದೆ. ಇದರಿಂದ ಲಜ್ಜಾಗೌರಿ ಆಚರಣೆಯ ಕೌಳ ತಾಂತ್ರಿಕರ ಒಂದು ಆಚರಣಾ ಪದ್ಧತಿ ಎಂಬುದು ಸ್ಪಷ್ಟವಾಗುತ್ತದೆ.

ಲಜ್ಜಾಗೌರಿ ಎಂಬ ಶಬ್ದವೇ ಬಹಳಷ್ಟು ರಹಸ್ಯಗಳನ್ನು ತನ್ನ ಗರ್ಭದೊಳಗೆ ಬಚ್ಚಿಟ್ಟುಕೊಂಡಂತೆನ್ನಿಸುತ್ತದೆ. ಇದಕ್ಕೆ ಕಾರಣ ಈ ಶಿಲ್ಪದ ಬಗ್ಗೆ ದಾಖಲೆಗಳಿಗಿಂತ ಊಹೆಗಳೇ ಪ್ರಧಾನವಾಗಿರುವುದು ಒಂದು ಕಾರಣವಾದರೆ ಇವೆಲ್ಲವೂ ಹೆಚ್ಚಾಗಿ ಮಧ್ಯಯುಗದಲ್ಲಿಯೇ ಕಂಡು ಬರುವುದಾಗಿದೆ. ಈ ವಿಚಾರದಲ್ಲಿ ಸಾಕಷ್ಟು ಜನ ಸಂಶೋಧಕರು ವಿದ್ವಾಂಸರು ವಿಮರ್ಶಕರು ಸಾಕಷ್ಟು ಚರ್ಚೆಗಳನ್ನು ನಡೆಸಿದ್ದರೂ ಸಂಶೋಧನೆಗಳು ನಡೆದಿದ್ದರೂ ಇದು ಒಂದು ತಾತ್ವಿಕ ಮುಕ್ತಾಯಕ್ಕೆ ಬಂದಿಲ್ಲ. ಪ್ರತಿಯೊಬ್ಬರು ತಮಗೆ ಸರಿಕಂಡಂತೆ, ತಮ್ಮ ಸಂಶೋಧನಾ ಜ್ಞಾನದ ಮಿತಿಯಲ್ಲಿ ಹೇಳಿದ್ದಾರೆ. ಲಜ್ಜಾಗೌರಿ ಶಬ್ದಕ್ಕೆ ಹಲವಾರು ಅರ್ಥಗಳನ್ನು ಕೊಡಲು ಪ್ರಯತ್ನಿಸಿದ್ದಾರೆ. ಜನಸಾಮಾನ್ಯರಲ್ಲಿ ಪ್ರಚಲಿತದಲ್ಲಿರುವ 'ಲಜ್ಜಾಗೌರಿ' ಯನ್ನು ವಿದ್ವತ್ ವಲಯವು 'ಲಜ್ಜಾಗೌರಿ' ಎಂದು ಕರೆಯುತ್ತದೆ.... ಸಂಸ್ಕೃತದಲ್ಲಿ ಲಂಜಾ ಎಂದರೆ ನಿರ್ಲಜ್ಜ ಸ್ತ್ರೀ ವೇಶ್ಯ, ಲಕ್ಷ್ಮೀ ಎಂಬ ಅರ್ಥಗಳಿವೆ.... ಲಂಜಾ ಎನ್ನುವದನ್ನು ನಗ್ನತೆಗೆ ಪರ್ಯಾಯವಾಗಿ ಬಳಸಿದಂತಿದೆ

---

೨೧. ಎಸ್.ಎಸ್. ಹಿರೇಮಠ : ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ, ಭಾಗ-೨ ಪುಟ-೨೮೪-೨೮೫

ಲಂಜಾಗೌರಿಗೆ ಸಂಸ್ಕಾರದ (Euphimistic) ಅಥವಾ ಮಂಗಲೀಕರಣದ ರೂಪ ಕೊಡಲು "ಲಜ್ಜಾಗೌರಿ" ಎಂದು ಕರೆಯಲಾಯಿತು.[೨೨]

ಆದರೆ ಈ ಮಾತನ್ನು ಪೂರ್ಣ ಸತ್ಯ ಎಂದು ಒಪ್ಪಿಕೊಳ್ಳಲಾಗದು. ಏಕೆಂದರೆ ಗ್ರಾಮ ಭಾಷೆಯಲ್ಲಿ ಲಜ್ಜಾ ಎಂಬ ಪದಕ್ಕೆ ಬೇರೆಯೇ ಅರ್ಥವಿದೆ. ಆಡು ನುಡಿಯಲ್ಲಿ "ಲಜ್ಜೆ" ಎಂದರೆ ನಾಚಿಕೆಯುಳ್ಳವಳು, ಲಜ್ಜೆಯನ್ನು ಕಾಪಾಡುವವಳು "ಲಜ್ಜೆ"ಯು ಪುರುಷಶಾಹಿ ಸಂಸ್ಕೃತಿಯು ಮಹಿಳೆಗೆ ಆರೋಪಿಸಿದ ಅಂತರ್ಗತ ಮೌಲ್ಯವು ಹೌದು.[೨೩] ಲಜ್ಜಾಗೌರಿ ಎಂಬ ಶಬ್ದವು ಸ್ತ್ರೀಯ ನಾಚಿಕೆಯನ್ನು ಎತ್ತಿ ತೋರಿಸುವುದಕ್ಕಾಗಿ ಬಳಕೆಯಲ್ಲಿ ಬಂದ ಶಬ್ದ ಎಂಬುದನ್ನು ನಾವಿಲ್ಲಿ ಗಮನಿಸಬಹುದು. ಅದೇ ರೀತಿಯಾಗಿ ಇನ್ನೊಂದು ದೃಷ್ಟಿಯಿಂದಲೂ ಈ ಶಬ್ದವನ್ನು ಗಮನಿಸಿದವರಿದ್ದಾರೆ. ಕ್ರಿ.ಶ. ೬ನೆಯ ಶತಮಾನದ ಬಾದಾಮಿಯ ಚಾಲುಕ್ಯರ ಶಾಸನಗಳಲ್ಲಿ 'ಲಂಜಿಕೇಶ್ವರ' ಲಂಜೇಶ್ವರ ಎಂಬ ಗ್ರಾಮದ ಹೆಸರು ಬರುತ್ತದೆ. ಈ ಗ್ರಾಮ ಮಹಾಕೂಟದ ಹತ್ತಿರವೇ ಇದ್ದು ಲಂಜೇಶ್ವರನು ಮಹಾಕೂಟ ಸಮಾಜದಲ್ಲಿರುವ ಆತ್ಮಲಿಂಗದ ಸ್ವರೂಪದ ದೇವತೆಯಾಗಿದ್ದ ಆತನ ಪತ್ನಿ ಲಂಜಾಗೌರಿ ಕ್ರಮೇಣ. ಮೇಲಿನ ಕಾರಣದಿಂದಾಗಿ 'ಲಜ್ಜಾಗೌರಿ'ಯೆಂದೇ ಪ್ರಸಿದ್ಧಳಾದ್ದರಿಂದ ಲಜ್ಜಾಗೌರೀಶ್ವರನಾದ[೨೪] ಇದೇ ಉಲ್ಲೇಖವು ಮಹಾಕೂಟದ ಕ್ಷೇತ್ರಮಹಾತ್ಮೆಯಲ್ಲಿ ಶಾಖಂಭರಿ ಮಹಾತ್ಮೆಯಲ್ಲೂ ಉಲ್ಲೇಖಿಸಲಾಗಿದೆ. ಇವುಗಳನ್ನೆಲ್ಲಾ ಗಮನಿಸಿದಾಗ ಲಜ್ಜಾಗೌರಿ ಶಿಲ್ಪವು ಮಾತೃದೇವತೆಯ ಆರಾಧನೆಯ ಮುಂದುವರಿದ ಭಾಗವೆಂದು ನಾವು ತಿಳಿಯಬಹುದು.

ಲಜ್ಜಾಗೌರಿ ಶಿಲ್ಪಗಳಲ್ಲಿ ನಮಗೆ ಕಾಣಿಸುವುದು ಸ್ತನ, ಗರ್ಭ ಮತ್ತು ಯೋನಿ ಭಾಗಗಳು ಇವುಗಳನ್ನು ಮಾತೃದೇವತೆಯ ಪ್ರತೀಕಗಳೆಂದು ಗುರುತಿಸಲಾಗಿದೆ. ಇತಿಹಾಸ ಪೂರ್ವ ಕಾಲದ ಮಾತೃದೇವತೆಯ ಶಿಲ್ಪಗಳ ಮುಂದುವರಿದ ಭಾಗವೆಂದು ಇದನ್ನು ಗುರುತಿಸಬಹುದಾದರೂ ಈ ಶಿಲ್ಪಗಳನ್ನು ಅದಕ್ಕಿಂತಲೂ ಭಿನ್ನ ದೃಷ್ಟಿಕೋನದಿಂದ ಪ್ರಾಚೀನ ಶಿಲ್ಪಗಳ ಸರಳ ಮತ್ತು ನೇರ ದೃಷ್ಟಿಕೋನ ಹೊಂದಿದ್ದು ಇವುಗಳು ಸಾರ್ವಜನಿಕವಾಗಿಯೇ ಪೂಜಿಸಲ್ಪಡುತ್ತಿದ್ದುದು ಮತ್ತು ಇಂದಿನ ಕಾಲದಲ್ಲೂ ನಾವು ಅಶ್ಲೀಲವೆಂದು ಹೇಳುವ ರೀತಿಯಲ್ಲಿರದೆ ಇತರ

---

೨೨. ಡಾ. ಬಿ.ಬಿ.ನಾಯಕ(ಸಂ) : ಬೆಳ್ಳಿ ಬೆಳಕು ಮಾಲೆ ಪ್ರಾತಿನಿಧಿಕ ಸಂಕಲನ, ಜಾನಪದ ಲೇಖನಗಳು. ಪುಟ-೧೫೫ ಡಾ.ಶೈಲಜ ಹಿರೇಮಠರವರ ಲೇಖನ/ಮಾತೃಪ್ರಧಾನ ಪರಿಕಲ್ಪನೆ

೨೩. ಡಾ. ಬಿ.ಬಿ.ನಾಯಕ(ಸಂ) : ಬೆಳ್ಳಿ ಬೆಳಕು ಮಾಲೆ ಪ್ರಾತಿನಿಧಿಕ ಸಂಕಲನ, ಜಾನಪದ ಲೇಖನಗಳು. ಪುಟ-೧೫೫ ಡಾ.ಶೈಲಜ ಹಿರೇಮಠರವರ ಲೇಖನ/ಮಾತೃಪ್ರಧಾನ ಪರಿಕಲ್ಪನೆ

೨೪. ಡಾ. ಜೋತ್ಸ್ನಾ ಕಾಮತ್ : ಮಹಿಳೆ ಒಂದು ಅಧ್ಯಯನ, ಪುಟ-೧೫

ಶಿಲ್ಪಗಳಂತೆಯೇ ಗುರುತಿಸಲ್ಪಟ್ಟದು. ಆದರೆ ಲಜ್ಜಾಗೌರಿ ಶಿಲ್ಪಗಳು ಆ ರೀತಿಯಲ್ಲಿರದೆ ರಹಸ್ಯ ಸ್ಥಳಗಳಲ್ಲಿ ಕೊಳ್ಳಗಳಲ್ಲಿ ಗುಹೆಗಳಲ್ಲಿ ದೊರಕಿರುವುದು, ಶಿಲ್ಪಗಳು ಉಳಿದ ರೀತಿಯಲ್ಲಿರದೆ ನಾಜೂಕಿನ ಕೆಲಸ ಕೆತ್ತನೆಯನ್ನೊಳಗೊಂಡಿದ್ದು ಅಗತ್ಯವಾದ ಭಾಗಗಳನ್ನಷ್ಟು ಉತ್ಪ್ರೇಕ್ಷಿಸಿ ತೋರಿಸಲಾಗಿದೆ.

ಈ ಶಿಲ್ಪಗಳಿಗೆ ಶಿರೋಭಾಗ ವಿರುವದಿಲ್ಲ. ಬದಲಾಗಿ ಆ ಜಾಗದಲ್ಲಿ ವೃತ್ತಾಕಾರವನ್ನು ಅಥವಾ ಅರಳಿದ ಕಮಲವನ್ನು ತೋರಿಸಲಾಗಿದೆ. ಕೈಗಳನ್ನು ಎರಡೂ ಕಡೆ ಅಗಲಿಸಿ ಆ ಕೈಗಳಲ್ಲೂ ಕಮಲಗಳಿರುತ್ತವೆ. ತೊಡೆಯ ಭಾಗ ಅಗಲಿಸಲ್ಪಟ್ಟಿದ್ದು, ಯೋನಿಯು ಸ್ಪಷ್ಟವಾಗುವಂತೆ ಕೆತ್ತಲ್ಪಟ್ಟಿರುವುದು ಅದೇ ರೀತಿ ಸ್ತನಗಳನ್ನು ದಷ್ಟ-ಪುಷ್ಟವಾಗಿ ವೃತ್ತಾಕಾರವಾಗಿ ಕೆತ್ತಲ್ಪಟ್ಟಿದೆ. ಈ ಶಿಲ್ಪಗಳು ಕುಳಿತ ಭಂಗಿಯಲ್ಲಿ ಮತ್ತು ಮಲಗಿದ ಭಂಗಿಯಲ್ಲಿ ಕೆಲವೊಮ್ಮೆ ಪ್ರಸೂತಿ ಭಂಗಿಯಲ್ಲಿರುತ್ತದೆ. ತಜ್ಞರು ಇದನ್ನು ಉತ್ಥಾನಪಾದ ಭಂಗಿ ಎಂದೂ ಗುರಿತಿಸಿರುವುದಿದೆ.

ಲೈಂಗಿಕ ಭಾಗಗಳನ್ನು ಉತ್ಪ್ರೇಕ್ಷಿಸಿ ಈ ಲಜ್ಜಾಗೌರಿ ಶಿಲ್ಪಗಳು ಕೆತ್ತಲ್ಪಟ್ಟಿರುವುದರಿಂದ ಇದು ಸಂತಾನೋತ್ಪತ್ತಿಯನ್ನು ಸೂಚಿಸುತ್ತದೆ ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಈ ಹಿನ್ನೆಲೆಯಲ್ಲಿಯೇ ಈ ಶಿಲ್ಪವನ್ನು ಬಂಜೆಯರು ಮತ್ತು ಗರ್ಭಿಣಿಯರು ಪೂಜಿಸುತ್ತಾರೆ. ರಹಸ್ಯ ಸ್ಥಳಗಳಲ್ಲಿರುವ ಈ ಶಿಲ್ಪದ ಯೋನಿಭಾಗಕ್ಕೆ ಬೆಣ್ಣೆ ಲೇಪಿಸುವ ಎಣ್ಣೆ ಹಚ್ಚಿ ಪೂಜಿಸುವ ಸಂಪ್ರದಾಯ ಬೆಳೆದು ಬಂದಿದೆ ಎನ್ನಲಾಗಿದೆ.

ಲಜ್ಜಾಗೌರಿ ಶಿಲ್ಪಗಳ ಮೂಲವು ಮಾತೃದೇವತೆಯ ಆರಾಧನೆಯ ಹಿನ್ನೆಲೆಯಲ್ಲಿಯೇ ಬೆಳೆದು ಬಂದುದಾಗಿದ್ದು ಮಾತೃದೇವತೆಯ ಮುಂದುವರಿದ ಭಾಗವೇ ಲಜ್ಜಾಗೌರಿ ಶಿಲ್ಪಗಳು ಎಂದು ನಿಸ್ಸಂಶಯವಾಗಿ ಹೇಳಬಹುದು. ಶಿಲ್ಪದ ರೀತಿಯು ಪ್ರಾಚೀನ ಮಾತೃದೇವತೆಯ ಶಿಲ್ಪಗಳಿಗಿಂತ ಭಿನ್ನವಾಗಿದ್ದರೂ ಜನರ ನೀತಿಗಳಲ್ಲಿ ಬೆಳವಣಿಗೆ ಹೊಂದಿದಂತೆ ಹೆಚ್ಚು ಹೆಚ್ಚು ಪರಿಷ್ಕೃತಗೊಂಡು ಸರಳೀಕೃತಗೊಂಡಿದೆ. ಇದಕ್ಕೆ ಕಾರಣಗಳು ಹಲವಾರಿವೆ. ಮುಖ್ಯವಾಗಿ ವೇದಗಳು ಉಪನಿಷತ್ತುಗಳು, ಪುರಾಣಗಳು, ಜನರ ನಂಬಿಕೆಯ ಮೇಲೆ ಬಹಳ ಪ್ರಭಾವ ಬೀರಿವೆ. ಅದಕ್ಕೆ ಪೂರಕವಾಗಿ ಹಲವಾರು ಧರ್ಮಗಳು ಪಂಥಗಳು ಕೂಡಾ ತಮ್ಮ ಕೊಡುಗೆಯನ್ನು ನೀಡಿವೆ. ಪ್ರತಿಯೊಂದು ಪಂಥವು ತನ್ನದೇ ಆದ ಆಚಾರ ವಿಚಾರಗಳನ್ನು ಹೊಂದಿದ್ದು, ತನ್ನ ಧರ್ಮದ ಕಟ್ಟು ಪಾಡುಗಳಿಗೆ ಒಳಪಟ್ಟಿರುತ್ತವೆ. ಅಂತಹ ಸಂದರ್ಭದಲ್ಲಿ ತಾನು ನಂಬಿದ ದೇವರನ್ನು ಆರಾಧಿಸುವ ರೀತಿಯಲ್ಲಿ ಹಲವಾರು ಗೊಂದಲಗಳು ಉಂಟಾಗುತ್ತವೆ. ಇವು

ಹೊಸ ಹೊಸ ಅನ್ವೇಷಣೆಗಳಿಗೆ ಅವಕಾಶವನ್ನು ನೀಡುತ್ತವೆ. ಅಂತಹ ಸಂದರ್ಭದಲ್ಲಿ ಸಂಕೀರ್ಣ ವಿಚಾರಗಳು ಸರಳೀಕೃತ ಗೊಳ್ಳುತ್ತವೆ. ಬಹುಶಃ ಈ ರೀತಿಯ ಒಂದು ಬಲವಾದ ಕಾರಣವೇ ಲಜ್ಜಾಗೌರಿ ಶಿಲ್ಪದ ಹಿನ್ನೆಲೆಯಲ್ಲಿಯೂ ಇರಬಹುದಾಗಿದೆ.

ಈ ರೀತಿಯ ಕಾರಣಗಳೇನೇ ಇರಲಿ ಲಜ್ಜಾಗೌರಿ ಶಿಲ್ಪವು ಮಾತೃದೇವತೆಯ ಆರಾಧನೆಯ ಮುಂದುವರೆದ ಪರಿಷ್ಕೃತ ರೂಪ ಎಂದು ಹೇಳಲು ಯಾವುದೇ ರೀತಿಯ ಆಕ್ಷೇಪಣೆಗಳುಂಟಾಗುವುದಿಲ್ಲ. ಇಂದಿನ ಕಾಲಕ್ಕೆ ಲಜ್ಜಾಗೌರಿ ಶಿಲ್ಪವು ಕೇವಲ ಸಂತಾನಾಪೇಕ್ಷೆಯ ಮೂರ್ತಿಯಾಗಿ ಉಳಿದು ಬಂದರೂ ಹಿಂದಿನ ಕಾಲದಲ್ಲಿ ಇದು ಖಂಡಿತವಾಗಿಯೂ ತಾಂತ್ರಿಕ ಹಿನ್ನೆಲೆಯಲ್ಲಿಯೇ ರಚಿತವಾಗಿದೆ. ಮಾತೃದೇವತೆಯ ಸರಳೀಕೃತಗೊಂಡು ಒಂದು ಪಂಥದ ಆರಾಧನೆಯ ಮೂಲವಾಗಿ ರಚಿತವಾಗಿದೆ. ಆದರೆ ಇದರ ಹಿನ್ನೆಲೆಯಲ್ಲಿ ಕಂಡುಬರುವುದು ಮಾತ್ರ ಯೋನಿ, ಲಿಂಗಗಳ ಸಂಬಂಧವೇ ಆಗಿದೆ ಇದು, ಪ್ರಕೃತಿ ಮತ್ತು ಪುರುಷವೆಂದೇ ಹೇಳಲ್ಪಟ್ಟಿದೆ. ಈ ಹಿನ್ನೆಲೆಯಲ್ಲಿ ರಚಿತವಾದ ಲಜ್ಜಾಗೌರಿ ಶಿಲ್ಪಗಳನ್ನು ನಾವು ಪುರುಷ ಪ್ರತೀಕವಾದ ಲಿಂಗಕ್ಕೆ ಪ್ರತಿಯಾಗಿ ರಚಿತವಾಗಿದೆ ಎನ್ನಬಹುದು.

ಅಧ್ಯಾಯ : ಮೂರು

## ಕರ್ನಾಟಕದಲ್ಲಿ ಲಜ್ಜಾಗೌರಿ ಶಿಲ್ಪಗಳ ಪ್ರಮುಖ ನೆಲೆಗಳು, ಶಿಲ್ಪಗಳ ಸ್ವರೂಪ

ಭಾರತದಲ್ಲಿ ಶಕ್ತಿ ಉಪಾಸನೆ ಮತ್ತು ಮಾತೃದೇವತೆಯ ಆರಾಧನೆ ಬಹಳ ಪುರಾತನವಾದುದು ಹಾಗೆಯೇ ಈ ಶಕ್ತಿ ಉಪಾಸನೆಯು ಸರ್ವವ್ಯಾಪ್ತಿಯಾಗಿತ್ತು. ಆ ಕಾಲದಲ್ಲಿ ಇದು ಕೇವಲ ತಾಂತ್ರಿಕರ ಮತ್ತು ವಾಮಾಚಾರಗಳ ಸಾಧನೆಯ ಮಾರ್ಗವಾಗಿರಲಿಲ್ಲ ಬದಲಾಗಿ ಎಲ್ಲ ಭಾರತೀಯರ ನಿತ್ಯದ ಧಾರ್ಮಿಕ ಬದುಕಿನಲ್ಲಿ ಶಕ್ತಿ ಆರಾಧನೆಯ ಹಾಸು ಹೊಕ್ಕಾಗಿತ್ತು. ಸುಮಾರು ಕ್ರಿ.ಶ.ಪೂರ್ವ ಐದನೆಯ ಶತಮಾನದಿಂದೀಚೆಗೆ, ನಮಗೆ ದೊರೆಯುವ ಆಧಾರಗಳಂತೆ ನಮ್ಮಲ್ಲಿ ಮೊದಲು ಬಳಕೆಯಲ್ಲಿದ್ದುದು ಶಕ್ತಿ ಆರಾಧನೆಯೇ ಬಹುಶಃ ಆಗಿನ ಕಾಲದಲ್ಲಿ ಜನರಲ್ಲಿ ಭಕ್ತಿಗಿಂತ ಶಕ್ತಿಯೇ ಸುಲಭ ಮಾರ್ಗವೆಂದು ಜನರ ನಂಬಿಕೆ ಇದ್ದಿರಬಹುದು.

ಶಕ್ತಿ ಉಪಾಸನೆಯ ವಾಙ್ಮಯ ರೂಪಗಳ ದರ್ಶನವು ಎಷ್ಟು ಗಮನಾರ್ಹವಾಗಿದೆಯೋ ಅಷ್ಟೇ ಮಟ್ಟಿಗೆ ಅವಳ ಮೂರ್ತಿಯ ರೂಪಗಳ ದರ್ಶನವೂ ಆಶ್ಚರ್ಯಕರವಾಗಿಯೇ ವಿಮೂಢಗೊಳಿಸುತ್ತದೆ ಒಂದು (ಇಳಿ ಬಿದ್ದ) ಕರಂಡಕದ ಸುಂದರ ರೂಪದಲ್ಲಿ ಆಕೆ ತನ್ನ ಪ್ರಾಥಮಿಕ ಮೂರ್ತಿ ಸ್ವರೂಪವನ್ನು ಪ್ರಕಟಿಸಿರುವುದುಂಟು.[೧]

---

೦೧. ಡಾ. ವಿಠಲರಾವ್ ಗಾಯಕ್ವಾಡ್ (ಸಂ) : ಲಜ್ಜಾಗೌರಿ, ಪುಟ–೧

ಇದನ್ನು ನಾವು ಕರ್ನಾಟಕದ ಬಹುಭಾಗಗಳಲ್ಲಿ ಲಜ್ಜಾಗೌರಿ ಶಿಲ್ಪಗಳು ದೊರೆತ ಸ್ಥಳಗಳನ್ನು ಪ್ರದೇಶಗಳನ್ನು ಗಮನಿಸಿದಾಗ ತಿಳಿಯುತ್ತದೆ. ಹೆಚ್ಚಿನ ಲಜ್ಜಾಗೌರಿ ಶಿಲ್ಪಗಳು ಕಣಿವೆಗಳಲ್ಲಿ ಗುಹಾಂತರಗಳಲ್ಲಿ ದೊರೆತಿವೆ ಎಂಬುದು ಗಮನಾರ್ಹ.

ಕರ್ನಾಟಕದಲ್ಲಿ ಮುಖ್ಯವಾಗಿ ಸನ್ನತಿ, ಪಿಕ್ಲಿಹಾಳ್, ನಾರಾಯಣ ಪೇಟ, ಬಳ್ಳಾರಿ ಹೀಗೆ ಎಲ್ಲೆಡೆ ನಮಗೆ ಜನ ವಸತಿಯ ಕುರುಹುಗಳು ಕಂಡು ಬರುತ್ತವೆ. ಉತ್ತರ ಕರ್ನಾಟಕದ ಕೆಲವೆಡೆಗಳಲ್ಲಿರುವ ನೂತನ ಶಿಲಾಯುಗ ಬೃಹತ್ ಶಿಲಾಯುಗ (ಸು.ಕ್ರಿ.ಪೂ.೧೦೦೦-೫೦೦) ಕಾಲದ ಬಂಡೆ ವರ್ಣಚಿತ್ರಗಳು ಈ ವಿಷಯದ ದೃಷ್ಟಿಯಿಂದ ಕೂತೂಹಲ ಕಾರಿಯಾಗಿದೆ. ಈ ಕೆಂಪು ಬಣ್ಣದ ಚಿತ್ರಗಳಲ್ಲಿ ಇತ್ತೀಚೀನ ಅನ್ವೇಷಣೆಯಲ್ಲಿ ಕಂಡು ಬಂದ ನಾರಾಯಣ ಪೇಟ್ (ಗಂಗಾವತಿ-ರಾಯಚೂರು) ಯಲ್ಲಿಯೂ ಗವಿವರ್ಣ ಚಿತ್ರವು ತುಂಬ ಮಹತ್ವದೆಂದು ತೋರುತ್ತದೆ.

ಮುಂದಕ್ಕೆಬಾಗಿದ ಸುಮಾರು ೫ ಮೀ ಎತ್ತರದ ಕಲ್ಲಾಸರೆಯ ಒಳಬದಿಯ ಸಮತಟ್ಟಿನ ಮೇಲೆ ಸುಮಾರು ೪-೫ಮೀ ಎತ್ತರದ ನಿಂತ ಭಂಗಿಯಲ್ಲಿ ಗಂಡಸಿನ ರೇಖಾ ಚಿತ್ರವಿದೆ. ದೇಹವನ್ನು ಸ್ವಲ್ಪಕುಗ್ಗಿಸಿ ಕಾಲುಗಳನ್ನು ಅಗಲಿಸಿದ ಕೈಗಳೆರಡಕ್ಕೂ ಬದಿಯಿಂದ ಬಾಚಿದ್ದು ಮೊಳಕೈ ಗಂಟಿನಿಂದ ಮೇಲಕ್ಕೆತ್ತಲಾಗಿದೆ. ಮೈ ತುಂಬ ಸರಳ ರೇಖಾಚಿತ್ರಗಳಿವೆ ಇದೆ. ತರಹದ ಒಂದು ಚಿತ್ರ ಮಲ್ಲಾಪೂರದ ಒಂದು ಕಲ್ಲಾಸರೆಯಲ್ಲಿದೆ. ಅದು ನಗ್ನವಾಗಿದೆ. ನಾರಾಯಣ ಪೇಟದ ಚಿತ್ರದಲ್ಲಿ ಸೊಂಟದಿಂದ ಕೆಳಗಡೆ ಭಾಗ ಮುಸುಕಾಗಿರುವದರಿಂದ ಇದು ನಗ್ನತೆಯಲ್ಲಿದೆಯೋ ಇಲ್ಲವೇ ಸ್ಪಷ್ಟವಾಗಿ ತಿಳಿಯುವುದಿಲ್ಲ.

ಈ ರೀತಿ ಕುಳಿತ ಬಂಗಿ ಲಜ್ಜಾಗೌರಿ ಕುಳಿತ ಭಂಗಿಯ ಪೂರ್ವಭಾವಿ ಹಂತವೆಂಬ ಭಾವನೆ ಸ್ಪಷ್ಟವಾಗಿ ಬರುತ್ತದೆ.[೨] ಇತ್ತೀಚಿಗಿನ ನಾಲ್ಕು ಐದು ದಶಕಗಳಲ್ಲಿ ಕರ್ನಾಟಕ, ಆಂದ್ರ, ಮಹಾರಾಷ್ಟ್ರಗಳಲ್ಲಿ ಉತ್ಖನನ ಕಾಲಕ್ಕೆ ಕೆಲವು ವಿಚಿತ್ರ ಸ್ತ್ರೀ ವಿಗ್ರಹಗಳು ಕಂಡು ಬಂದಿವೆ. ಶಿರೋಹೀನವಾಗಿದ್ದು. ಕೈಯಲ್ಲಿ ಕಮಲ ಹಿಡಿದಂತವು ಕೇವಲ ದಢವಿದ್ದು ಯೋನಿ ಹಾಗೂ ಸ್ತನ ಪ್ರದೇಶ ಸ್ಪಷ್ಟವಾಗಿ ತೋರಿಸುವಂಥವು. ಜೊತೆಗೆ ಸ್ತ್ರೀಯ ಸಂಭೋಗಾವಸ್ಥೆಯ ಭಂಗಿಯನ್ನು

---

೦೨. ಡಾ. ಎಂ. ಚಿದಾನಂದ ಮೂರ್ತಿ(ಸಂ) : ಶಂಭಾ. ಜೋಷಿ ಅಭಿನಂಧನ ಗ್ರಂಥ ಅದ್ಯಯನ, ಪುಟ-೩೭೯-೩೮೦ ಡಾ. ಅ. ಸುಂದರವರ ಲೇಖನ/ಉತ್ತರ ಕರ್ನಾಟಕದಲ್ಲಿಯ ಕೆಲವು ಪ್ರಾಚೀನ ತಾಂತ್ರಿಕ ಮೂರ್ತಿಗಳು

ಸೂಚಿಸುವಂತೆ ಕಾಲು ತೆರೆದು ಮಡಚಿ ಮಲಗಿದಂಥ ಮತ್ತು ಕುಳಿತ ವಿಗ್ರಹಗಳಿವು.[೧೩] ಕೆಲವು ಸುಟ್ಟ ಮಣ್ಣಿನವಾಗಿದ್ದು ಸಣ್ಣವಿದ್ದರೆ ಕೆಲವು ಮರಳು ಕಲ್ಲಿನಲ್ಲಿ ಕೆತ್ತಲ್ಪಟ್ಟವು ಕೆಲವು ಶಿಲ್ಪಗಳು ದೊಡ್ಡದಾಗಿದ್ದು ಕರಿಯಕಲ್ಲಿನಲ್ಲಿ ಕೆತ್ತಲ್ಪಟ್ಟಿದೆ. ಸಿದ್ದನಕೊಳ್ಳದಲ್ಲಿ ದೊರೆತ ವಿಗ್ರಹವೂ ಹಾಸು ಬಂಡೆಯ ಮೇಲೆ ಕೆತ್ತಲಾಗಿದ್ದು. ಈ ರೀತಿಯ ಶಿಲ್ಪಗಳಲ್ಲಿ ಅಪರೂಪವಾಗಿದೆ. ಸನ್ನತಿಯಲ್ಲಿ ಬಹು ಸಣ್ಣ ಆಕಾರದ ಸುಡಾವೆ ಮಣ್ಣಿನ ಶಿಲ್ಪಗಳು ದೊರಕಿವೆ. ಮರಳು ಕಲ್ಲಿನಲ್ಲಿ ಸುಂದರವಾಗಿ ಕಲಾತ್ಮಕವಾಗಿ ಕೆತ್ತಲಾಗಿರುವ ಹಲವಾರು ವಿಗ್ರಹಗಳು ಸಣ್ಣ ದೊಡ್ಡ ಆಕಾರವು ದೊರೆತಿವೆ. ಹೆಚ್ಚುಪಾಲು ಕರ್ನಾಟಕ ಉತ್ತರ ಭಾಗಗಳಲ್ಲಿ ಅಂದರೆ ಮಹಾಕೂಟ, ಬಾದಾಮಿ, ಹುಲಿಗೆವ್ವನ ಕೊಳ್ಳ, ಸಿದ್ದನಕೊಳ್ಳ, ಸಿದ್ದನಕಲ್ಲು, ಬೀಳಗಿ, ಸನ್ನತಿ ಮಜತಿ, ಬಳ್ಳಿಗಾವೆ, ಮುಂತಾದ ಭಾಗಗಳಲ್ಲಿ ದೊರೆತರೆ ಕರ್ನಾಟಕದ ಹೊರಗೆ ಆಂದ್ರ ಪ್ರದೇಶದ ಕರ್ನೂಲು, ಆಲಂಪುರ, ಮಹಾರಾಷ್ಟ್ರದ ಕೆಲವು ಭಾಗಗಳಲ್ಲಿ ನಾಂದೇಡ್, ಬೋಕರ್ದನ[೧೪] ಮುಂತಾದೆಡೆ ಈ ರೀತಿಯ ಸಾಕಷ್ಟು ಶಿಲ್ಪಗಳು ದೊರಕಿದ್ದು, ಹೆಚ್ಚಾಗಿ ಜನವಸತಿ ಹೀನ ಪ್ರದೇಶಗಳಲ್ಲಿ ಈ ಶಿಲ್ಪಗಳು ದೊರಕಿವೆ.

ಗುಲಬರ್ಗಾ ಜಿಲ್ಲೆ, ಶಹಾಪೂರ ತಾಲೂಕಿನ ಸನ್ನತಿಯಲ್ಲಿ ದೊರೆತಿರುವ ಸುಡಾವೆ ಮಣ್ಣಿನ ಶಿಲ್ಪಗಳು ಇವು ಆಕಾರದಲ್ಲಿ ತೀರಾ ಸಣ್ಣದಾಗಿದೆ. ಸನ್ನತಿಯಲ್ಲಿ ಸ್ತೂಪಗಳು ಕಟ್ಟಡಗಳು, ವಿವಿಧ ಪಾತ್ರೆಗಳಲ್ಲದೆ ಬೇರೆ ರೀತಿಯ ಹಲವಾರು ಶಿಲ್ಪಗಳೂ ದೊರಕಿದ್ದು ಈ ಕುರಿತು ಇನ್ನೂ ಸಂಶೋಧನೆಗಳು ನಡಿದೇ ಇವೆ. ಇಲ್ಲಿ ದೊರೆತ ಶಿಲ್ಪಗಳಲ್ಲಿ ಒಂದು ಕಚ್ಚಾ ಮತ್ತು ಇನ್ನೊಂದು ಕಾವಿ ಬಣ್ಣ ಹಚ್ಚಿದ ಲಜ್ಜಾಗೌರಿ ಶಿಲ್ಪಗಳು ಸಿಕ್ಕಿವೆ, ಇವು ೨-೩ನೇ ಶತಮಾನದೆಂದು ಹೇಳಬಹುದು.[೧೫]

ಲಜ್ಜಾಗೌರಿ ಶಿಲ್ಪಗಳು ಬಹು ಆಶ್ಚರ್ಯವನ್ನುಂಟು ಮಾಡುವಂತಿವೆ. ಇಲ್ಲಿ ದೊರೆತ ಲಜ್ಜಾಗೌರಿ ಶಿಲ್ಪಗಳು ಆನಂತರ ಕಾಲದಲ್ಲಿ ದೊರೆತ ಮರಳು ಕಲ್ಲಿನ ಶಿಲ್ಪಗಳಂತೆ ದೊಡ್ಡದಾಗಿರದೆ ಸಿಂಧೂ ನದಿ ಕಣಿವೆಯಲ್ಲಿ ಕಂಡು ಬರುವ ಶಿಲ್ಪಗಳಂತಿದೆ. ಈ ಶಿಲ್ಪವು ದೊರೆತ ಕಾಲಮಾನ ಶಿಲ್ಪದ ಆಕಾರ ಮತ್ತು ಗಾತ್ರವನ್ನು ನೋಡಿದಾಗ ಬಹುಶಃ ಇದು ಕರ್ನಾಟಕದ ಇತರೆಡೆ ದೊರೆತ ಲಜ್ಜಾಗೌರಿ ಶಿಲ್ಪಗಳಿಗಿಂತ ಪೂರ್ವದಲ್ಲಿಯೇ ಅಂದರೆ ಇತಿಹಾಸ ಕಾಲಕ್ಕೂ ಮೊದಲೇ ಲಜ್ಜಾಗೌರಿ ಆಚರಣೆ ಇತ್ತೆಂದು ನಾವು ಊಹಿಸಬಹುದು.

---

೧೩. ಡಾ. ಜ್ಯೋತ್ಸ್ನಾಕಾಮತ್ : ಮಹಿಳೆ ಒಂದು ಅಧ್ಯಯನ, ಪುಟ-೯

೧೪. ಡಾ. ಜ್ಯೋತ್ಸ್ನಾಕಾಮತ್ : ಮಹಿಳೆ ಒಂದು ಅಧ್ಯಯನ, ಪುಟ-೯

೧೫. ಡಾ. ಎಂ. ಚಿದಾನಂದ ಮೂರ್ತಿ(ಸಂ) : ಶಂಭಾ. ಜೋಷಿ ಅಭಿನಂಧನ ಗ್ರಂಥ ಅದ್ಯಯನ. ಪುಟ-೩೯೦ ಡಾ. ಅ. ಸುಂದರವರ ಲೇಖನ/ಉತ್ತರ ಕರ್ನಾಟಕದಲ್ಲಿಯ ಕೆಲವು ಪ್ರಾಚೀನ ತಾಂತ್ರಿಕ ಮೂರ್ತಿಗಳು

ಹೆಚ್ಚಿನ ಮೂರ್ತಿಗಳು ಕಣಿವೆಗಳಲ್ಲಿ ನದಿಕೊಳ್ಳಗಳಲ್ಲಿ ದೊರೆತಿದ್ದು ಬಹಳ ಪ್ರಾಚೀನವಾಗಿದೆ. ವೇದಕಾಲದಿಂದ ಪ್ರಚಲಿತವಿದ್ದ ಉತ್ತಾನಪಾದ ಅದಿತಿ(ಭೂಮಿ)ಯ ಪ್ರತಿರೂಪವನ್ನು ಇವುಗಳಲ್ಲಿ ಕಾಣಬಹುದು. ಎಂದು ಮಹೆಂಜೋದಾರೂ ಹರಪ್ಪಗಳಲ್ಲಿ ದೊರೆತ ಮಾತೃಪೂಜೆಯ (ದ್ರಾವಿಡ) ಪರಂಪರೆಯ ದ್ಯೋತಕವಾಗಿವೆ ಎಂದು ಇನ್ನು ಕೆಲವರು ಅಭಿಪ್ರಾಯ ಪಟ್ಟಿದ್ದಾರೆ. ತಂತ್ರ ಪರಂಪರೆಯ (ಶಾಕ್ತ ಸಂಪ್ರದಾಯದ) ಶಕ್ತಿ ಪೂಜೆಯ ಪ್ರತೀಕಗಳು ಎಂದು ಹಲವರ ಅಭಿಪ್ರಾಯವಾಗಿದ್ದರೆ, ಒಳ್ಳೆ ಮಳೆ-ಬೆಳೆ ನೀರಿಕ್ಷೆಯಲ್ಲಿ ಹಿಂದಿನವರು ಕೈಗೊಳ್ಳುತ್ತಿದ್ದ ಭೂಮಿಯ ಪೂಜೆಯ ಸಂಕೇತದ ವಿಗ್ರಹಗಳು ಎಂದು ಕೆಲವರು ಸಾರಿದರು ಪ್ರಾದೇಶಿಕ ಜಾನಪದ ದೇವತೆಯ ಕೃಷಿರೂಪಗಳ ಇದ್ದು, ಕಮಲದ ಹೂ, ಫಲಶಕ್ತಿ, ಸೂಚೀಸುತ್ತದೆ ಎಂದು ಇನ್ನಿತರು ಯೋಚಿಸಿದರು. ಒಬ್ಬ ಅಂತರಾಷ್ಟ್ರೀಯ ಖ್ಯಾತಿಯ ಪುರಾತತ್ವ ಶಾಸ್ತ್ರಜ್ಞರಂತೂ ಈ ವಿಗ್ರಹಗಳು ಈ ನಾಡಿನವು ಇರದೇ ಈಜಿಪ್ಪ ಮೂಲದವಿದ್ದು ರೋಮ್-ಭಾರತಗಳ ಸಾಂಸ್ಕೃತಿಕ ಸಂಬಂಧದ ಯುಗದಲ್ಲಿ ಕೊಡು-ಕೊಳಿಯ ಭಾಗವಾಗಿ ಎರವಲು ಪಡೆದ ಸಂಪ್ರದಾಯಕ್ಕೆ ಸೇರಿದವು ಎಂದು ಘೋಷಿಸಿದರು.[೬] ಇಲ್ಲಿ ಕೊನೆಯದಂತೂ ತೀರಾ ಅಸಂಬದ್ಧವಾದವೆಂದು ನಮಗೆ ಮೇಲ್ನೋಟಕ್ಕೆ ಅನ್ನಿಸದೇ ಇರದು ಕಾರಣವೆಂದರೆ ಮುಖ್ಯವಾಗಿ ಈಜಿಪ್ಪ ಮೂಲದಲ್ಲಿ ನಮಗೆ ಈ ರೀತಿಯ ಶಿಲ್ಪಗಳು ಎಲ್ಲೂ ಕಂಡು ಬರದಿರುವುದು. ಮತ್ತು ಲಜ್ಜಾಗೌರಿ ಶಿಲ್ಪಗಳು ಕೆಲವಡೆ ನಮಗೆ ಕಂಡು ಬರುವ ಪ್ರದೇಶಗಳನ್ನು ನೋಡಿದರೆ, ಉದಾ: ಸಿದ್ದನಕೊಳ್ಳ ಆಲಂಪುರ ಇತ್ಯಾದಿ ಇದು ಸ್ಪಷ್ಟವಾಗುತ್ತದೆ. ಅದೇ ರೀತಿ ಸನ್ನತಿಯ ಸುಡಾವೆ ಮಣ್ಣಿನ ಶಿಲ್ಪ ಒಂದು ವೇಳೆ ಕೊಡುಕೊಳ್ಳುವಿಕೆಯ ಹಿನ್ನಲೆಯಲ್ಲಿಯೇ ಆಗಿದ್ದರು, ತೀರಾ ಸಣ್ಣದಾದ ಸುಡಾವೆ ಮಣ್ಣಿನ ಶಿಲ್ಪವಂತೂ ರಚನೆಮಾಡಬೇಕಾದ ಪ್ರಮೇಯವೇ ಇಲ್ಲ. ಬದಲಾಗಿ ಇವು ಯಾವುದೋ ಗುಪ್ತ ಆಚರಣೆಯ ಉದ್ದೇಶಕ್ಕಾಗಿ ರಚಿತವಾದುದೆಂದು ನಿಸ್ಸಂಶಯವಾಗಿ ಹೇಳಬಹುದು.

ಈ ಹಿನ್ನೆಲೆಯಲ್ಲಿ ಒಂದಂತೂ ಸ್ಪಷ್ಟ ಏನೆಂದರೆ ಲಜ್ಜಾಗೌರಿ ಶಿಲ್ಪಗಳು ಹೆಣ್ಣನ್ನು ಸೃಷ್ಟಿ ಮತ್ತು ಪಾಲನೆಯ ಹಿನ್ನೆಲೆಯಲ್ಲಿ ಆದಿಮಾತೆ (ಮಾತೃದೇವತೆ) ಯೆಂದೇ ನಂಬಲಾಗಿದೆ ಮತ್ತು ಆ ಹಿನ್ನೆಲೆಯಲ್ಲಿ ಶಿಲ್ಪಗಳನ್ನು ರಚಿಸಿ ಪೂಜಿಸುವ ಸಂಪ್ರದಾಯ ಬೆಳೆದುಬಂದಿದೆ. ತಾನು ದಿನವೂ ನೋಡುತ್ತಿದ್ದ ಅನುಭವಿಸುತ್ತಿದ್ದ ಸೃಷ್ಟಿಯ ವ್ಯಾಪಾರಗಳನ್ನು ತನಗೆ ಪರಿಚಿತವಿದ್ದ ವಾತಾವರಣದಲ್ಲಿ ಆದಿಮಾನವನು ಅರ್ಥೈಸಿಕೊಳ್ಳಲು ಯತ್ನಿಸಿದ. ಕ್ರಮೇಣ ಮಳೆ-ಬೆಳೆ ಸಮೃದ್ಧಿಯನ್ನು ಕೊಡ ಮಾಡುವ ಅದೃಷ್ಟ ಶಕ್ತಿಯನ್ನು ರೂಪಿಸುವ ಶ್ರಮಪಟ್ಟ ಸಂತತಿ ಬರಲು ಅದು ಆಹಾರಾಧಿಗಳನ್ನು ಪಡೆದು ಬೆಳೆಯಲು ಕಾರಣಳಾದ ಜನನಿಯನ್ನು ಬೃಹತ್

೦೬. ಡಾ. ಜ್ಯೋತ್ಸ್ನಾಕಾಮತ್ : ಮಹಿಳೆ ಒಂದು ಅಧ್ಯಯನ, ಪುಟ-೯-೧೦

ಸೃಷ್ಟಿರೂಪದಲ್ಲಿ ಕಂಡು ಪೂಜಿಸಿದ ಸಫಲತೆಗೆ ಅವಳನ್ನು ಪ್ರಾರ್ಥಿಸಿದ ಸೃಷ್ಟಿ-ಪುಷ್ಟಿ (ಜನನ ಹಾಗೂ ಪೋಷಣೆ)ಗೆ ಹೆಣ್ಣೇ ಕಾರಣ! ಅದರಂತೆ ಕಾಳು, ಬೆಳೆ ಕಾರಣವಾದ ಭೂಮಿಯೂ ಹೆಣ್ಣು ದೇವತೆಯೇ! ಎಂಬ ಕಲ್ಪನೆ ಅವನಲ್ಲಿ ಸ್ಥಿರವಾಗಿ ಬೇರು ಬಿಟ್ಟ ಯುಗದಲ್ಲಿ ಈ ವಿಗ್ರಹಗಳ ಮೂಲವನ್ನು ಹುಡುಕುವುದು. ಚರಿತ್ರೆ ಹಾಗೂ ಉತ್ಖನನಗಳ ದೃಷ್ಟಿಯಿಂದ ಪ್ರಾಗೈತಿಹಾಸ ಕಾಲದಿಂದಲೂ ಇಂಥ ವಿಗ್ರಹಗಳು ನಮ್ಮಲ್ಲಿ ಮೂರು ಸಹಸ್ರವರ್ಷಗಳಿಂದಲೂ ಸೃಷ್ಟಿಗೆ ಕಾರಣಳಾದ ಭೂಮಾತೆಯ ಪೂಜೆ ಬಳಕೆಯಲ್ಲಿರುವುದನ್ನು ಗುರುತಿಸಬಹುದು.

ಯೋನಿ ಹಾಗೂ ಸ್ತನಗಳಿಗೆ ಪ್ರಾಧ್ಯಾನ್ಯ ಕೊಟ್ಟ ಈ ವಿಗ್ರಹಗಳು ಸುಫಲತೆ ಸಮೃದ್ಧಿಗಳ ಆರಾಧ್ಯ ದೇವತೆಯ ರೂಪಗಳಾಗಿವೆ.[೭] ಇವಲ್ಲದೆ ಆಂದ್ರಪ್ರದೇಶದ ಆಲಂಪುರ ಎಂಬಲ್ಲಿಯ ನವಬ್ರಹ್ಮೇಶ್ವರ ದೇವಾಲಯದಲ್ಲಿ ಒಂದು ಲಜ್ಜಾಗೌರಿ ಶಿಲ್ಪವಿದೆ ಐತಿಹಾಸಿಕ ಮತ್ತು ಪೌರಾಣಿಕ ದೃಷ್ಟಿಯಿಂದ ಈ ಶಿಲ್ಪವು ಮಹತ್ವದ್ದಾಗಿದೆ. ಕಾರಣ ಪುರಾಣಗಳಲ್ಲಿ ವ್ಯಕ್ತವಾಗುವ ನವಬ್ರಹ್ಮೇಶ್ವರರಲ್ಲಿ ಲಜ್ಜಾಗೌರಿ ಶಿಲ್ಪಗಳಲ್ಲಿ ಪ್ರಮುಖವಾದವುಗಳೆಂದರೆ ಮಹಾಕೂಟ, ಬಾದಾಮಿ, ಬಾಗಲಕೋಟ ಸಿದ್ದನಕೊಳ್ಳ, ಹುಲಿಗೆಮ್ಮನಕೊಳ್ಳ, ಬಳ್ಳಿಗಾವಿ, ಮಜತಿ, ಇತ್ಯಾದಿ ಪ್ರದೇಶಗಳು ಇವುಗಳಲ್ಲಿ ಕೆಲವು ಶಿಲ್ಪಗಳು ಭಗ್ನಗೊಂಡವಾಗಿದ್ದರೆ ಇನ್ನು ಕೆಲವು ಶಿಲ್ಪಗಳು ಉತ್ತಮವಾಗಿ ಸಂರಕ್ಷಿಸಲ್ಪಟ್ಟಿವೆ. ಅಧ್ಯಯನದ ದೃಷ್ಟಿಯಿಂದ ಇವುಗಳಲ್ಲಿ ಬಾಗಲಕೋಟ ಜಿಲ್ಲೆಯ ಬಾದಾಮಿಯ ಸಂಗ್ರಹಾಲಯದಲ್ಲಿರುವ ಶಿಲ್ಪ ಸಿದ್ದನಕೊಳ್ಳದಲ್ಲಿ ಹಾಸು ಬಂಡೆಯ ಮೇಲೆ ಕೆತ್ತಲಾಗಿರುವ ಶಿಲ್ಪ ಹುಲಿಗೆಮ್ಮನಕೊಳ್ಳದ ಶಿಲ್ಪ ಇತ್ಯಾದಿ ಕೆಲವು ಶಿಲ್ಪಗಳು ಗಮನಾರ್ಹವಾಗಿದೆ. ಹೊಸ ಮಹಾಕೂಟದಲ್ಲಿ ಮೂರ್ತಿಗೆ "ಲಜ್ಜಾಗೌರಿ" ಎಂದು ಸ್ಥಳೀಕರು ಕರೆಯುತ್ತಾರೆ.

ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲೂಕಿನ ಬಳ್ಳಿಗಾವಿಯ ಶಿಲ್ಪವನ್ನು "ಕಮಲಮ್ಮ" ದೇವತೆಯೆಂದು ರೂಢಿಯಲ್ಲಿ ಹೇಳುತ್ತಾರೆ. ಸನ್ನತಿಯಲ್ಲಿ ದೊರೆತ ಮೂರು ಸಣ್ಣ ಮೂರ್ತಿಗಳು ಸುಟ್ಟ ಮಣ್ಣಿನವು ಉಳಿದೆಲ್ಲವೂ ಕಲ್ಲಿನದಾಗಿದ್ದು ದೊಡ್ಡ ಪ್ರಮಾಣದಲ್ಲಿವೆ. ಕಲ್ಲಿನ ಮೂರ್ತಿಗಳಲ್ಲಿ ನಾಗರಾಳ ಮತ್ತು ಬಳ್ಳಿಗಾವಿಯದು ಕರಿಕಲ್ಲಿನದು, ಉಳಿದವು ನಸುಗೆಂಪು, ಮರಳು ಕಲ್ಲಿನವು ಸಿದ್ದನಕೊಳ್ಳದಲ್ಲಿರುವುದು ಮಾತ್ರ ಗವಿಯೊಳಗೆ ನೆಲದ ಹಾಸು ಬಂಡೆಯ ಮೇಲೆ ಕೆತ್ತಲಾಗಿದೆ.[೮]

---

೦೭. ಡಾ. ಜ್ಯೋತ್ಸ್ನಾಕಾಮತ್: ಮಹಿಳೆ ಒಂದು ಅಧ್ಯಯನ, ಪುಟ-೧೧

೦೮. ಡಾ. ಎಂ. ಚಿದಾನಂದ ಮೂರ್ತಿ(ಸಂ) : ಶಂಭಾ. ಜೋಷಿ ಅಭಿನಂಧನ ಗ್ರಂಥ ಅದ್ಯಯನ. ಪುಟ-೩೮೫ ಡಾ. ಅ. ಸುಂದರವರ ಲೇಖನ/ಉತ್ತರ ಕರ್ನಾಟಕದಲ್ಲಿಯ ಕೆಲವು ಪ್ರಾಚೀನ ತಾಂತ್ರಿಕ ಮೂರ್ತಿಗಳು

ಈ ಎಲ್ಲಾ ಲಜ್ಜಾಗೌರಿ ಶಿಲ್ಪಗಳಲ್ಲಿಯ ಒಂದು ಸಾಮ್ಯತೆ ಏನೆಂದರೆ ಒಂದು ಸ್ತ್ರೀಯು ನಗ್ನಳಾಗಿ ಅಂಗಾತವಾಗಿ ಮಲಗಿದ್ದು ಕಾಲುಗಳೆರಡನ್ನು ಮಡಚಿಕೊಂಡಂತೆ ಮತ್ತು ಮೇಲಕ್ಕೆಳೆದು ಕೊಂಡಂತೆ ಎರಡೂ ತೊಡೆಗಳನ್ನು ಅಗಲಕ್ಕೆ ಚಾಚಿ ಮಲಗಿಕೊಂಡಂತಿರುತ್ತದೆ ಅಥವಾ ಮೊಳಕಾಲು ಮಡಚಿ ತೊಡೆಗಳನ್ನು ಅಂಗಾತ ಬಿಡಿಸಿ ಕುಳಿತಕೊಂಡ ಭಂಗಿಯಲ್ಲಿರುತ್ತದೆ. ಹಿಮ್ಮಡಿಯು ನೆಲದ ಮೇಲೆ ಊರಿಕೊಂಡಂತಿರುತ್ತದೆ. ಆಕರ್ಷಕ ದೇಹ ಸೌಂದರ್ಯವನ್ನು ಹೊಂದಿದ ಯುವತಿಯು ಸುಂದರ ಮೈಕಟ್ಟಿನವಳಾಗಿದ್ದು ಕೈಗಳೆರಡನ್ನು ಮೇಲಕ್ಕೆಚಾಚಿ ಎರಡೂ ಕೈಗಳಲ್ಲಿ ಕಮಲದ ಹೂವನ್ನು ಹಿಡಿದು ಕೊಂಡಿರುತ್ತದೆ. ಮುಂಡ ಮಾತ್ರ ವಿದ್ದು ತಲೆಯ ಭಾಗದಲ್ಲಿ ಸಾಮಾನ್ಯವಾಗಿ ಅರಳಿದ ಸುಂದರ ಕಮಲದ ಹೂವಿನ ಚಿತ್ರವಿರುತ್ತದೆ. ಈವುಗಳು ಲಜ್ಜಾಗೌರಿ ಸ್ವಂತಿಕೆಗೆ ತಕ್ಕಂತೆ ಅಥವಾ ಭಂಗಿಯ ವಿಚಾರದಲ್ಲಿ ನೋಡಿದಾಗ ಸ್ವಲ್ಪ ಮಟ್ಟಿನ ವ್ಯತ್ಯಾಸಗಳು ಕಂಡು ಬರುತ್ತವೆ. ಇದಲ್ಲದೇ ಶಿಲ್ಪಗಳ ಸೌಂದರ್ಯ ಮತ್ತು ಕಲಾವಿದನ ಸ್ವಂತಿಕೆಯ ಮೇಲೆ ಹಾಗೂ ಅಳತೆಯಲ್ಲಿ ಸ್ವಲ್ಪಮಟ್ಟಿನ ವ್ಯತ್ಯಾಸಗಳು ಕಂಡು ಬರುತ್ತವೆ.

ಬಾಗಲಕೋಟ ಜಿಲ್ಲೆ, ಹುನಗುಂದ ತಾಲೂಕಿನ ಐಹೊಳೆ ದೇವಾಲಯಗಳ ಸಮೂಹದಲ್ಲಿ ಅಲ್ಲಿಯ ಬಯಲಿನಲ್ಲಿ ಇರಿಸಲಾದ ಶಿಲ್ಪಗಳಲ್ಲಿ ಲಜ್ಜಾಗೌರಿಯ ಶಿಲ್ಪವೊಂದಿದೆ ದೊಡ್ಡ ಗಾತ್ರದ ಈ ಶಿಲ್ಪವೂ ಸಂಪೂರ್ಣ ಹಾಳಾಗಿದ್ದು ಈ ಶಿಲ್ಪದ ಲಕ್ಷಣಗಳನ್ನು ಮತ್ತು ಅಳಿದುಳಿದ ಭಾಗಗಳನ್ನು ನೋಡಿ ಲಜ್ಜಾಗೌರಿಯ ಶಿಲ್ಪವಿದು ಎಂದು ಊಹಿಸುವಂತಿದೆ. ಈ ಶಿಲ್ಪವು ಬಹುಶಃ ಕ್ರಿ.ಶ.೫–೬ ಶತಮಾನಕ್ಕೆ ಸೇರಿದ್ದಾಗಿದೆ. ಇದು ಬಹುಪಾಲು ಬಾದಾಮಿಯ ವಸ್ತುಸಂಗ್ರಹಾಲಯದಲ್ಲಿರುವ ಶಿಲ್ಪವನ್ನು ಹೋಲುತ್ತದೆ ಆದರೆ ಅದಕ್ಕಿಂತಲೂ ದೊಡ್ಡದಾಗಿದೆ ಮಾತ್ರವಲ್ಲ ಹೆಚ್ಚು ತ್ರಿಮಾನಾಕಾರ (High Relief) ವನ್ನು ಹೊಂದಿದೆ ನಸುಗೆಂಪು ಕಲ್ಲಿನಲ್ಲಿ ಕೊರೆದ ಶಿಲ್ಪವಿದು. ಎರಡು ಕೈಗಳನ್ನು ಮೇಲಕ್ಕೆ ಮಡಚಿದಂತಿದೆ. ಮುಂಗೈ ಭಾಗಗಳು ತುಂಡಾಗಿವೆ ತೊಡೆ ಭಾಗವೂ ತುಂಡಾಗಿದ್ದು ಸಮೀಪದಲ್ಲಿಯೇ ಇರಿಸಲಾಗಿದೆ ಸೊಂಟದ ಭಾಗವು ಸಣ್ಣದಾಗಿದ್ದು ಕುಂಭದ ಆಕಾರದಲ್ಲಿದೆ ಶಿರೋಭಾಗವೂ ಕಾಣೆಯಾಗಿದೆ. ಹೆಚ್ಚಿನ ವಿವರಗಳು ಇಲ್ಲಿ ಗುರುತಿಸಲು ಸಾಧ್ಯವಾಗುವುದಿಲ್ಲವಾದರೂ ಮೇಲ್ನೋಟಕ್ಕೆ ಇದು ಅಂದಿನ ಕಾಲದಲ್ಲಿ ಕೆತ್ತಲ್ಪಟ್ಟ ಬಹು ಸುಂದರ ಶಿಲ್ಪಗಳಲ್ಲಿ ಒಂದೆರಡು ಹೇಳಬಹುದು.

ಬಾಗಲಕೋಟ ಜಿಲ್ಲೆ ಬಾದಾಮಿ ತಾಲೂಕಿನ ಹೊಸ ಮಹಾಕೂಟದಲ್ಲಿ ಒಂದು ಲಜ್ಜಾಗೌರಿ ಶಿಲ್ಪವಿದೆ, ಮಹಾಕೂಟವು ಪುರಾಣ ಕಾಲದಲ್ಲಿ ಮಕುಟೇಶ್ವರಿಯ ಹೆಸರಿನಲ್ಲಿ ಹೆಚ್ಚು ಪ್ರಸಿದ್ಧವಿತ್ತು, ಮಹಾಕೂಟಕ್ಕೆ 'ಕೊಟವಿ' ಶಬ್ದಕ್ಕೂ ಸಂಬಂಧವಿದೆ. 'ಕೊಟವಿ' ಎಂದರೆ ದುರ್ಗೆಯ ಇನ್ನೊಂದು

ಹೆಸರು. 'ನಗ್ನಸ್ತ್ರೀ' ಎಂದೂ ಮತ್ತೊಂದು ಅರ್ಥವಿದೆ. ಭಾರತದ ಪ್ರಸಿದ್ಧ ಶಕ್ತಿಪೀಠಗಳು, ಕ್ರಮೇಣ ಶೈವ ಪಂಥದ ಕೇಂದ್ರಗಳಾಗಿ ಪರಿಣಮಿಸಿದ ಕಾಲದಲ್ಲಿ ಈ ಮಹಾ ಕೊಟವಿಯ ಪೀಠ, ಮುಕುಟ, 'ಮಹಾಕೂಟೇಶ್ವರ' ಆಗಿರಲು ಸಾಕು. ಅಲ್ಲಿದ್ದ ನಗ್ನ, ಶಿರೋಹಿನ, ಸ್ತ್ರೀ ವಿಗ್ರಹ, ಕೊಟವಿಗೆ 'ಲಜ್ಜಾಗೌರಿ' ಎಂಬ ಹೆಸರಿದೆ. ಈಗ ಮಹಾಕೂಟೇಶ್ವರ ಮಂದಿರದ ಮೂಲೆಯಲ್ಲಿ ಅತ್ಯಂತ ನಿರ್ಧಯತೆಯಿಂದ ಒಡೆದುಹಾಕಿ ಬಿದ್ದಿರುವ ವಿಗ್ರಹ ನೂರು ವರ್ಷಗಳ ಹಿಂದೆ ಸಹ ಸುಸ್ಥಿತಿಯಲ್ಲಿತ್ತು ಅತ್ಯಂತ ಕಲಾಕ್ಮತವಾಗಿದ್ದ ಆದರೆ ಶಿರದ ಬದಲಿಗೆ ಕಮಲವಿದ್ದ ಇಂಥ ದೇವಿಯ ವಿಚಿತ್ರ ಮೂರ್ತಿಯನ್ನು ತನ್ನ ಭಾರತಯಾತ್ರೆಯ ಸಂದರ್ಭದಲ್ಲಿ ಇನ್ನೆಲ್ಲಿಯೂ ನೋಡಿದ್ದಿಲ್ಲ.[೯] ಅತ್ಯಂತ ಕಲಾತ್ಮಕವಾಗಿದ್ದಿರಬಹುದಾದ ಈ ಶಿಲ್ಪದ ಶಿರೋಭಾಗದಲ್ಲಿ ಅರಳಿದ ಕಮಲವನ್ನು ಕೆತ್ತಲಾಗಿದೆ. ಈ ಕಮಲವು ಪೂರ್ಣವೃತ್ತಾಕಾರದಲ್ಲಿದ್ದು ಕಮಲದ ದಳಗಳನ್ನು ಸ್ಪಷ್ಟವಾಗಿ ಎರಡು ಹಂತದಲ್ಲಿ ಕೆತ್ತಲಾಗಿದೆ. ಕೈಗಳಲ್ಲಿಯೂ ಕಮಲದ ದಂಟುಗಳಿದ್ದು ಶಿರೋಭಾಗದ ಕಮಲಕ್ಕಿಂತ ಆಕಾರದಲ್ಲಿ ಸಣ್ಣವಾಗಿವೆ. ಕಮಲದ ಕೈಯ ಸುರಳಿಯಾಗಿ ತುಂಬಾ ಆಕರ್ಷಕವಾಗಿದ್ದು ಮತ್ತೆ ಮತ್ತೆ ನೋಡುವಂತಿವೆ. ಮುಂಭಾಗ (ಮುಂಗೈಗಳು) ಉಳಿದಿದ್ದು ಕೈಗಳನ್ನು ನೋಡಿದರೆ ಅತ್ಯಂತ ಸುಪ್ರಷ್ಟವಾದ ಸ್ತ್ರೀ ಶಿಲ್ಪ ಇದಾಗಿತ್ತು ಎಂದು ಊಹಿಸಬಹುದು ಈ ಶಿಲ್ಪದಲ್ಲಿ ಸದ್ಯಕ್ಕೆ ಇವಿಷ್ಟು ಉಳಿದು ಕೊಂಡಿರುವುದನ್ನು ಮಹಾಕೂಟದಲ್ಲಿ ನಾವು ಗಮನಿಸಬಹುದು.

ಬಾಗಲಕೋಟ ಜಿಲ್ಲೆ ಬಾದಾಮಿಯ ವಸ್ತು ಸಂಗ್ರಹಾಲಯದಲ್ಲಿ ಒಂದು ಲಜ್ಜಾಗೌರಿಯ ಸುಂದರಶಿಲ್ಪವನ್ನು ಸಂಗ್ರಹಿಸಿಡಲಾಗಿದೆ, ಇದು ನಾಗರಾಳದಲ್ಲಿ ದೊರಕಿದ್ದು ಎನ್ನಲಾಗಿದೆ. "ನಾಗರಾಳ" ಹೊಸ ಮಹಾಕೂಟ ಮತ್ತು ಜಾಲಿಹಾಳ, ಇಲ್ಲಿ ಒಂದೊಂದು ಸುಮಾರು ೨, ೩ ಕಿ.ಮೀ. ಅಂತರದಲ್ಲಿ ಕೆಂಪು ಮರಳಿನ ಬೆಟ್ಟಸಾಲುಗಳಲ್ಲಿಯ ಆಳವಾದ ಕೊಳ್ಳಗಳಿವೆ. ಬಾದಾಮಿ ಪ್ರದೇಶದ ಶಿವಯೋಗಿ ಮಂದಿರದ ಹತ್ತಿರವಿರುವ ಮೊದಲನೆಯದರಲ್ಲಿ ಕೊಳ್ಳದೊಳಗೆ ಸುಮಾರು ೭ನೆಯ ಶತಮಾನದ ಉತ್ತರಾರ್ದಕಾಲದ ಚಾಲುಕ್ಯ ಶೈಲಿಯ ನಾಗನಾಥ ದೇವಾಲಯವಿದೆ. ಈ ಕಲ್ಲಿನ ದೇವಾಲಯ ಕಟ್ಟುವುದಕ್ಕೆ ಮುಂಚೆಯೇ ಇದೇ ಸ್ಥಳದಲ್ಲಿ ಇಟ್ಟಿಗೆಯ ದೇವಾಲಯವಿದ್ದಿತು. ಅದರ ಅವಶೇಷಗಳು ದೇವಾಲಯದ ಹಿಂದೆ ನೆಲದಲ್ಲಿ ಕಾಣಿಸುತ್ತವೆ. ಅಲ್ಪ ಪ್ರಮಾಣದಲ್ಲಿ ಆ ಕಾಲದ ಮೃತ್ ಪಾತ್ರೆಯ ಚೂರುಗಳು ಸಿಗುತ್ತವೆ. ಸುಮಾರು ೭-೮ ವರ್ಷಗಳ ಹಿಂದೆ ಕೇಂದ್ರ ಪುರಾತತ್ವ ಸರ್ವೇಕ್ಷಣ ಶಾಖೆಯುವರು ಈ ದೇವಾಲಯದ ಮುಂದೆ ಅನಂತರ ಕಾಲದಲ್ಲಿ ಕಟ್ಟಲಾಗಿದ್ದ (ಕೆರೆಯ) ಒಡ್ಡನ್ನು ತೆಗೆದು ಸ್ವಚ್ಚಮಾಡುವ ಕಾಲದಲ್ಲಿ ಮೇಲೆ ವರ್ಣಿಸಿದ ಕರಿ ಕಲ್ಲಿನ ಶಿಲ್ಪವು ಸಿಕ್ಕಿತು. ಒಡ್ಡು ಕಟ್ಟುವ ಸಮಯದಲ್ಲಿ ೧೦೦ ಮೀ

೦೯. ಡಾ. ಜ್ಯೋತ್ಸ್ನಾಕಾಮತ್ : ಮಹಿಳೆ ಒಂದು ಅಧ್ಯಯನ, ಪುಟ-೧೩

ವಿಸ್ತಾರದ ಶಿಲ್ಪವನ್ನು ಅದರ ಮಹತ್ವವನ್ನು ಅರಿಯದೆ ಅದಕ್ಕೆ ಸೇರಿಸಿ ಕಟ್ಟಿರಬೇಕು. ಅದು ಮೊದಲಿನಿಂದಲೂ ಅಲ್ಲಿಯೇ ಇದ್ದಿರಬೇಕು ಶಿಲಾದೇವಾಲಯದ "ನಾಗನಾಥ" ಹೆಸರೂ ಅರ್ಥ ಗರ್ಭಿತವಾಗಿದೆ.[೧೦] ಈ ಶಿಲ್ಪವು ಇಂದು ಬಾದಾಮಿಯ ವಸ್ತು ಸಂಗ್ರಹಾಲಯದಲ್ಲಿ ಉತ್ತಮ ರೀತಿಯಲ್ಲಿ ಸಂರಕ್ಷಿಸಿ ಇಡಲಾಗಿದ್ದು ಅಧ್ಯಯನಕಾರರಿಗೆ ಅತ್ಯಂತ ಉತ್ತಮ ಆಕರವಾಗಿದೆ,

ಬಾಗಲಕೋಟೆಯ ಜಾನಪದ ವಸ್ತು ಸಂಗ್ರಹಾಲಯದಲ್ಲಿ ಇತ್ತಿಚೇಗೆ ಒಂದು ಲಜ್ಜಾಗೌರಿ ಶಿಲ್ಪವನ್ನು ಸಂಗ್ರಹಿಸಿಡಲಾಗಿದೆ. ಸುಮಾರು ೧೦-೧೧ನೇ ಶತಮಾನದ್ದು ಇರಬಹುದು. ಇದು ಲಜ್ಜಾಗೌರಿ ಶಿಲ್ಪಗಳಲ್ಲೇ ಅತ್ಯಂತ ವಿಶಿಷ್ಟವಾದುದಾಗಿದೆ. ಗುಡಿಜಾಪುರದಲ್ಲಿ ದೊರಕಿರುವ ಈ ಶಿಲ್ಪ ಲಜ್ಜಾಗೌರಿ ಶಿಲ್ಪಗಳ ಜೊತೆ ಹೋಲಿಸಿದಾಗ ಸಾಮಾನ್ಯ ಲಜ್ಜಾಗೌರಿ ಶಿಲ್ಪಗಳು ಎರಡೂ ತೊಡೆಗಳನ್ನು ಅಗಲಿಸಿ ಸಂಭೋಗಾವಸ್ಥೆಯ ರೀತಿಯಲ್ಲಿದ್ದರೆ ಇದು ಕಾಲುಗಳನ್ನು ಸ್ವಲ್ಪವೇ ಅಗಲಿಸಿ ಯೋನಿ ಭಾಗವನ್ನು ಮಾತ್ರ ತೆರೆದಿಟ್ಟು ಕುಳಿತ ಭಂಗಿಯಲ್ಲಿದೆ. ಕೈಗಳೆರಡನ್ನು ಕೆಳಗಡೆಗೆ ತೆಗೆದುಕೊಂಡು ಹೋಗಿ ಯೋನಿ ಭಾಗವನ್ನು ಅಗಲಿಸಿ ತೋರಿಸುತ್ತಿರುವಂತಿದೆ, ಪೂರ್ಣವಾಗಿ ಕುಳಿತುಕೊಂಡಿರುವ ಭಂಗಿಯಲ್ಲಿರುವ ಶಿಲ್ಪದ ತಲೆ ಭಾಗ ಕಮಲದ ಕುರುಹುಗಳು ಕಂಡುಬರುತ್ತವೆ. ಆದರೆ ಉಳಿದೆಡೆ ಕೈಗಳಲ್ಲಿಯೂ ಕಮಲಗಳನ್ನು ಹಿಡಿದಿರುವುದು ಎಲ್ಲೆಡೆ ಕಂಡು ಬರುವುದರಿಂದ ಮತ್ತು ಇಲ್ಲಿಯ ಶಿಲ್ಪದಲ್ಲಿ ಕೈಗಳು ಯೋನಿಯನ್ನು ಅಗಲಿಸಿ ತೋರಿಸುತ್ತಿದೆ. ಇಲ್ಲಿ ಅಭಿವ್ಯಕ್ತಿಯ ರೀತಿಯಲ್ಲಿ ವ್ಯತ್ಯಾಸವಿರುವುದನ್ನು ಗುರುತಿಸಬಹುದು. ಮೂಲ ಉದ್ದೇಶ ಇಲ್ಲಿಯೂ ಒಂದೇ ಆಗಿದೆ.

ಬಾಗಲಕೋಟ ಜಿಲ್ಲೆ, ಬಾದಾಮಿ ತಾಲೂಕಿನಿಂದ ೧೬ಕಿ.ಮಿ. ಅಂತರದಲ್ಲಿ ಹುಲಿಗೆಮ್ಮನ ಕೊಳ್ಳ ಇದೆ. ಕೊಳ್ಳದ ಮೂಲದಲ್ಲಿ ಒಂದು ವಿಶಾಲವಾದ ಗವಿ ಇದೆ, ಇದರೊಳಗೆ ಒಂದು ದೇವಿಯ ದೇವಾಲಯವಿದ್ದು ಮತ್ತು ದೊಡ್ಡ ಶಿವಲಿಂಗ, ಅದರ ಮುಂದೆ ನಂದಿ ಪಕ್ಕದಲ್ಲಿ ಗಣೇಶ. ಸ್ವಲ್ಪ ಮುಂದೆ ಮತ್ತೊಂದು ದೇವಿಯ ಶಿಲಾಮೂರ್ತಿಗಳು, ಗವಿಯೊಳಗಿನ ಬಂಡೆಯ ಮೇಲೆ ಕೆತ್ತಿದ ಬ್ರಹ್ಮ, ವಿಷ್ಣು, ಶಿವನೊಡನೆ ಸಪ್ತ ಮಾತೃಕೆ, ಉಬ್ಬು ಶಿಲ್ಪದ ಪಟ್ಟಿಕೆಯೂ ಇದೆ ಕೊಳ್ಳದೊಳಗೆ ಹೆಚ್ಚಾಗಿ ಶಿವಲಿಂಗವುಳ್ಳ ಸಣ್ಣ ಸಣ್ಣ ಗುಡಿಗಳಿವೆ ಒಂದರೊಳಗೆ ಉಮಾ-ಮಹೇಶ್ವರನ ಮೂರ್ತಿಇದೆ. ಲಜ್ಜಾಗೌರಿ ಮೂರ್ತಿಯೂ, ದೇವಿ ದೇವಾಲಯದ ಪಕ್ಕದ ಗುಡಿಯ

---

೧೦. ಡಾ. ಎಂ. ಚಿದಾನಂದ ಮೂರ್ತಿ(ಸಂ) : ಶಂಭಾ. ಜೋಷಿ ಅಭಿನಂಧನ ಗ್ರಂಥ ಅಧ್ಯಯನ. ಪುಟ-೩೮೬-೩೮೭ ಡಾ. ಅ. ಸುಂದರವರ ಲೇಖನ/ಉತ್ತರ ಕರ್ನಾಟಕದಲ್ಲಿಯ ಕೆಲವು ಪ್ರಾಚೀನ ತಾಂತ್ರಿಕ ಮೂರ್ತಿಗಳು

ಮುಂದೆ ಬಿದ್ದಿದೆ ಇಲ್ಲಿಯೇ ಮತ್ತೊಂದು ಲಜ್ಜಾಗೌರಿ ಮೂರ್ತಿಇದೆ.[೧೧] ಇಲ್ಲಿ ಎರಡು ಲಜ್ಜಾಗೌರಿ ಶಿಲ್ಪಗಳು ಭಗ್ನಾವಸ್ತೆಯಲ್ಲಿ ಬಿದ್ದಿರುವದನ್ನು ಕಾಣಬಹುದಾಗಿದೆ.

ಹುಲಿಗೆಮ್ಮನ ಕೊಳ್ಳದಲ್ಲಿರುವ ಲಜ್ಜಾಗೌರಿ ಶಿಲ್ಪವು ಬಾದಾಮಿಯ ಶಿಲ್ಪಕ್ಕೆ ಹೋಲಿಸಿದರೆ ಮತ್ತು ಬಾಗಲಕೋಟೆಯ ಸಂಗ್ರಹಾಲಯದಲ್ಲಿರುವ ಶಿಲ್ಪಗಳಿಗೆ ಹೋಲಿಸಿದರೆ ವಿಶೇಷ ಆಕರ್ಷಣೆಯನ್ನು ಉಂಟುಮಾಡುವುದಿಲ್ಲ. ಆದರೆ ಲಜ್ಜಾಗೌರಿಯ ಒಟ್ಟು ಶಿಲ್ಪಗಳ ಇತಿಹಾಸ ಅಧ್ಯಯನ ದೃಷ್ಟಿಯಿಂದ ಮಹತ್ವದ್ದಾಗಿದೆ. ಇದಕ್ಕೆ ಕಾರಣ ಈ ಶಿಲ್ಪದ ಶೈಲಿ ಆಕಾರ ಸುಣ್ಣ ಬಳಿದು ತನ್ನ ಮೂಲ ರೂಪ ಕಳೆದುಕೊಂಡಿರುವ ಶಿಲ್ಪವಾಗಿದೆ. ಉಬ್ಬುಶಿಲ್ಪದಲ್ಲಿರುವ ಈ ಎರಡೂ ಶಿಲ್ಪಗಳು ಬಹುಶಃ ಕ್ರಿ.ಶ. ೬-೭ ನೇ ಶತಮಾನದ್ದಾಗಿದೆ, ಸೌಂದರ್ಯದ ದೃಷ್ಟಿಯಿಂದ ಈ ಶಿಲ್ಪಗಳು ಅಷ್ಟೇನೂ ಆಕರ್ಷಕವಾಗಿಲ್ಲ ಇದು ಹೆಚ್ಚಾಗಿ ಜಾನಪದ ಶಿಲ್ಪಗಳನ್ನು ಹೋಲುತ್ತದೆ. ಸಣ್ಣ ಭುಜ ತೆಳ್ಳಗಿನ ಸೊಂಟ ಸಣ್ಣದಾಗಿರುವ ಸ್ತನಗಳು ಸಣ್ಣದಾಗಿರುವ ಎರಡೂ ತೊಡೆಗಳನ್ನು ಎರಡು ಪಕ್ಕಗಳಲ್ಲಿ ಅಗಲಿಸಲಾಗಿದೆ. ಎರಡೂ ಕೈಗಳನ್ನು ಪಕ್ಕಕ್ಕೆ ಎತ್ತಿ ಹಿಡಿದಿದ್ದು ಕೈಗಳಲ್ಲಿ ಕಮಲಗಳಿವೆ. ತಲೆಯ ಭಾಗದಲ್ಲಿಯೂ ಅರಳಿದ ಕಮಲವಿದ್ದು ಮೂರು ವೃತ್ತಗಳನ್ನು ಹೊಂದಿದೆ. ಮಿಕ್ಕಿದ ವಿವರಗಳು ಸ್ಪಷ್ಟವಾಗಿರುವುದಿಲ್ಲ. ಇನ್ನೊಂದು ಶಿಲ್ಪವೂ ಇದೇ ರೀತಿಯಿದ್ದರೂ ಬಲತೊಡೆಯನ್ನು ಸ್ವಲ್ಪ ಮಟ್ಟಿಗೆ ಇಳಿಸಿ ಹೆಚ್ಚಿನ ಭಾರವನ್ನು ಬಲತೊಡೆಯ ಮೇಲೆ ಹೊರಿಸಿದಂತಿದೆ ಸ್ತನಗಳು ತೀರಾ ವೃತ್ತಾಕಾರದಲ್ಲಿ ತಲೆಯ ಭಾಗದಲ್ಲಿ ಕಮಲದ ಬದಲು ದೊಡ್ಡದಾದ ಒಂದು ವೃತ್ತವಿದೆ. ಸುಣ್ಣ ಬಣ್ಣಗಳಿಂದಾಗಿ ವಿವರಗಳು ಕಂಡು ಬರುವುದಿಲ್ಲ ಮಾತ್ರವಲ್ಲದೆ ನಿರ್ವಹಣೆಯ ಕೊರತೆಯಿಂದಾಗಿ ಸವೆದು ಹೋಗಿರುವ ಶಿಲೆಯು ಮೊದಲಿನ ಶಿಲ್ಪಕ್ಕಿಂತಲೂ ಶಿಥಿಲಾವಸ್ಥೆಯಲ್ಲಿದೆ. ಈ ಎರಡೂ ಲಜ್ಜಾಗೌರಿ ಶಿಲ್ಪಗಳನ್ನು ಉಬ್ಬುಶಿಲ್ಪ (High Relief) ವೆಂದು ಹೇಳುವುದರ ಬದಲು ಲಘು ಲಜ್ಜಾಗೌರಿ ಉಬ್ಬು ಶಿಲ್ಪಗಳೆಂದು ಹೇಳುವುದು ಸರಿಯನಿಸುತ್ತದೆ.

ಬೆಳಗಾವಿ ಜಿಲ್ಲೆ, ಹುಕ್ಕೇರಿ ತಾಲೂಕು ಮಜತಿಯ ಶಿಲ್ಪವು (೧೩ ಸೆಂ.ಮೀ. ಚಚ್ಚೌಕ) ಹೆಚ್ಚು ಅರ್ಥವತ್ತಾಗಿದೆ. ರೇಖಾ ಚಿತ್ರಿತ ಹೊಟ್ಟೆಯ ಭಾಗವು ಮಧ್ಯದ ಭಾಗದಲ್ಲಿ ಉಬ್ಬಿದ್ದು ಮೇಲಿನ ಭಾಗ ಒಡೆದದ್ದು ಕಾಣುವ ಹಾಗೆ ಸಣ್ಣದಾಗಿರುವುದರಿಂದ ಕಲಶ (ಪೂರ್ಣಘಟ)ದ ಹಾಗೆ ಕಾಣುತ್ತದೆ ನಾಗಾರ್ಜುನ ಕೊಂಡದಲ್ಲಿ ದೊರೆತ ಶಿಲ್ಪದಲ್ಲಿ ಹೊಟ್ಟೆಯ ಭಾಗ ಮಣಿಹಾರಗಳಿಂದ ಅಲಂಕೃತವಾದ ಕೇಶವೇ ಆಗಿದ್ದು ಇದನ್ನು ನೆನಪಿಗೆ ತರುತ್ತದೆ. ಮೇಲಿನ

೧೧. ಡಾ. ಎಂ. ಚಿದಾನಂದ ಮೂರ್ತಿ(ಸಂ) : ಶಂಭಾ. ಜೋಷಿ ಅಭಿನಂಧನ ಗ್ರಂಥ ಆದ್ಯಯನ, ಪುಟ-೩೮೭ ಡಾ. ಅ. ಸುಂದರವರ ಲೇಖನ/ಉತ್ತರ ಕರ್ನಾಟಕದಲ್ಲಿಯ ಕೆಲವು ಪ್ರಾಚೀನ ತಾಂತ್ರಿಕ ಮೂರ್ತಿಗಳು

ಹಂತದಲ್ಲಿ ಎಡದಿಂದ ಬಲಕ್ಕೆ ಶಿವಲಿಂಗ (ಜೋಡಿ) ಸಿಂಹಮುಖ ಶಂಖ ಸಾಲಾಗಿ ಇವೆ. ಸ್ತ್ರೀಯು ಎಡಬದಿಗೆ ಒಬ್ಬಯೋಗಿಯು ಕೈ ಮುಗಿದು ನಿಂತಿದ್ದಾನೆ.[೧೨] ಈ ಶಿಲ್ಪವು ಸರಳ ಉಬ್ಬು ಶಿಲ್ಪವಾಗಿದ್ದು ಸಣ್ಣ ಅಳತೆಯಲ್ಲಿದೆ ಆದರೂ ಕಲಾವಿದ ತನ್ನ ಇತಿಮಿತಿಯಲ್ಲಿ ಸಾಧ್ಯವಾದಷ್ಟು ವಿವರವಾಗಿ ಕೆತ್ತಿರುವುದನ್ನು ನಾವು ಕಾಣಬಹುದು ಚಚ್ಚೌಕದಲ್ಲಿ ಜ್ಯಾಮಿತಿಗೆ ಹೆಚ್ಚು ಒತ್ತು ಕೊಟ್ಟಿದ್ದು ಎಲ್ಲವೂ ಚಚ್ಚೌಕ ಅಥವಾ ಆಯತದೊಳಗೆ ರಚಿಸಲ್ಪಟ್ಟಿದೆ.

ಬಾಗಲಕೋಟೆ ಜಿಲ್ಲೆ, ಬೀಳಗಿಯಲ್ಲಿ ಸಿದ್ದೇಶ್ವರ ದೇವಾಲಯದ ಆವರಣದಲ್ಲಿರುವ ಶಿಲ್ಪವು ಒಂದು ವಿಶಿಷ್ಟ ಶೈಲಿಯ ಲಜ್ಜಾಗೌರಿ ಶಿಲ್ಪವಿದೆ. ಬೇರೆಡೆಯ ಶಿಲ್ಪಗಳಿಗೆ ಹೋಲಿಸಿದರೆ ಈ ಶಿಲ್ಪವು ಜಾನಪದ ಶೈಲಿಗೆ ಹೆಚ್ಚು ಸಮೀಪವಾಗಿದೆ. ದೇವಾಲಯದ ಆವರಣದಲ್ಲಿ ಗೋಡೆಗೆ ಹೊಂದಿಸಿ ನಿಲ್ಲಿಸಿರುವ ಈ ಶಿಲ್ಪವು ಇಂದು ತೈಲ ಹಚ್ಚಿ ವಿವರಗಳು ಮಸುಕಾಗಿವೆ. ಈ ಶಿಲ್ಪ ಕೆಲವು ಲಜ್ಜಾಗೌರಿ ಶಿಲ್ಪಗಳು ನಾವು ಈ ಮೊದಲು ನೋಡಿದಂತೆ ಸಂಭೋಗಾವಸ್ಥೆಯ ರೀತಿಯಲ್ಲಿದ್ದರೆ. ಬೀಳಗಿಯ ಈ ಶಿಲ್ಪವು ಪ್ರಸವಾವಸ್ಥೆಯಲ್ಲಿದ್ದಂತೆ ಕಂಡು ಬರುತ್ತದೆ. ಕಲಾತ್ಮಕ ಅಂಶಗಳಿಗಿಂತ ವಿಭಿನ್ನವಾಗಿ ವಿಷಯಕ್ಕೆ ಹೆಚ್ಚಿನ ಮಹತ್ವ ನೀಡಿರುವುದನ್ನು ನಾವಿಲ್ಲಿ ನೋಡಬಹುದು.

ಮುಂಗೈ ತುಂಬ ಬಳೆಗಳನ್ನು ಹೊಂದಿರುವ ಈ ಶಿಲ್ಪದಲ್ಲಿ ಎರಡೂ ಕೈಗಳನ್ನು ತೋಳಿನ ಸಮಕ್ಕೆ ಮೇಲೆತ್ತಿದೆಯಾದರೂ ಕೈಯಲ್ಲಿ ಕಮಲದ ಹೂಗಳಿಲ್ಲ ಆದರೆ ತಲೆಯ ಭಾಗದಲ್ಲಿ ವೃತ್ತಾಕಾರವಿದೆ. ಕಮಲದ ದಳಗಳನ್ನು ಕೆತ್ತಿದ್ದರೂ ಇಂದು ಅದು ಹಚ್ಚಿದ ಎಣ್ಣೆಯ ಪ್ರಭಾವದಿಂದಾಗಿ ಗುರುತಿಸಲು ಸಾಧ್ಯವಿಲ್ಲ ಎರಡೂ ಕಾಲುಗಳನ್ನು ಎರಡೂ ಪಕ್ಕಗಳಲ್ಲಿ ಅಗಲವಾಗಿ ಸರಿಸಲಾಗಿದ್ದು ಹಿಂಭಾಗಕ್ಕೆ ಎತ್ತಿದೆ. ಇದು ವಿಶಿಷ್ಟ ಭಂಗಿಯಾಗಿದ್ದು ಕಂಡುಬರುತ್ತದೆ.

ಶಿವಮೊಗ್ಗ ಜಿಲ್ಲೆ ಶಿಕಾರಿಪುರ ತಾಲೂಕಿನ ಬಳ್ಳಿಗಾವಿಯ ಶಿಲ್ಪವನ್ನು ಸ್ಥಳಿಯರು ಕಮಲಮ್ಮ ಎಂದು ಕರೆಯುತ್ತಾರೆ.[೧೩] ಬಹುಶಃ ತಲೆಯ ಭಾಗದಲ್ಲಿ ಕಮಲವಿರುವುದರಿಂದ ಜನ ಹಾಗೆ ಕರೆಯುತ್ತಿರಬೇಕು ಸುಮಾರು ಒಂದೂವರೆ ಅಡಿ ಎತ್ತರವಿರುವ ಈ ಶಿಲ್ಪ. ಅಲ್ಲಿಯೇ ಇದ್ದುದಲ್ಲ

---

೧೨. ಡಾ. ಎಂ. ಚಿದಾನಂದ ಮೂರ್ತಿ(ಸಂ) : ಶಂಭಾ. ಜೋಷಿ ಅಭಿನಂಧನ ಗ್ರಂಥ ಅದ್ಯಯನ, ಪುಟ-೩೮೬ ಡಾ. ಅ. ಸುಂದರವರ ಲೇಖನ/ಉತ್ತರ ಕರ್ನಾಟಕದಲ್ಲಿಯ ಕೆಲವು ಪ್ರಾಚೀನ ತಾಂತ್ರಿಕ ಮೂರ್ತಿಗಳು

೧೩. ಡಾ. ಎಂ. ಚಿದಾನಂದ ಮೂರ್ತಿ(ಸಂ) : ಶಂಭಾ. ಜೋಷಿ ಅಭಿನಂಧನ ಗ್ರಂಥ ಅದ್ಯಯನ, ಪುಟ-೩೮೫ ಡಾ. ಅ. ಸುಂದರವರ ಲೇಖನ/ಉತ್ತರ ಕರ್ನಾಟಕದಲ್ಲಿಯ ಕೆಲವು ಪ್ರಾಚೀನ ತಾಂತ್ರಿಕ ಮೂರ್ತಿಗಳು

ಸಮೀಪದ ಬೇರೆಡೆಯಿಂದ ಇಲ್ಲಿ ತಂದು ಪ್ರತಿಷ್ಠಾಪಿಸರಬೇಕು. ಇಂದು ದೇವಾಲಯ ಪ್ರದೇಶದಲ್ಲಿ ಸಣ್ಣ ಗುಡಿಯೊಂದರಲ್ಲಿ ಪ್ರತಿಷ್ಠಾಪಿಸಲ್ಪಟ್ಟಿರುವ ಈ ಶಿಲ್ಪಕ್ಕೆ ಬಟ್ಟೆತೊಡಿಸಿ ನಿತ್ಯ ಪೂಜೆ ನಡೆಯುತ್ತಿದೆ. ನಾಗರಾಳದಂತೆ ಈ ಶಿಲ್ಪವು ದೊಡ್ಡದಾಗಿಲ್ಲ. ಈ ಶಿಲ್ಪವು ನೋಡಲು ಸುಂದರವಾಗಿದೆ. ಸ್ಥಳೀಯರು ಇದನ್ನು ಕಮಲಮ್ಮ ಎಂದು ಕರೆಯುತ್ತಾರೆ. ಬಳ್ಳಿಗಾವಿಯ ಕೆರೆಯ ಮೇಲೆ ದೊಡ್ಡ ಸ್ತನಗಳ ತೆರೆದ ಯೋನಿಯ ಮುಖದ ಜಾಗದಲ್ಲಿ ಅರಳಿದ ಕಮಲವಿರುವ ಲಜ್ಜಾಗೌರಿ ಎಂದು ಉತ್ತರ ಕರ್ನಾಟಕದಲ್ಲಿ ಕರೆಯಲಾಗುವ ಒಂದು ವಿಗ್ರಹವಿದೆ. ಬಳ್ಳಿಗಾವಿಯ ಜನರು ಈ ವಿಗ್ರಹವನ್ನು ಅಕ್ಕಮಾಹಾದೇವಿ ಎಂದು ಭಾವಿಸುತ್ತಾರೆ. ಅದು ಅಕ್ಕಮಹಾದೇವಿ ಎಂಬುದು ನಿಜವಲ್ಲದಿದ್ದರೂ ಅವಳು ಪಕ್ಕದ ಊರಿನವಳು.[೧೪] ಎಂದು ಹೇಳಲಾಗುತ್ತದೆ.

ಮೇಲೆ ಹೇಳಿದ ಎಲ್ಲಾ ಶಿಲ್ಪಗಳಿಗಿಂತ ವಿಭಿನ್ನವಾದ ವಿಶಿಷ್ಟ ಪೂರ್ಣವಾದ ಶಿಲ್ಪವೊಂದು ಸಿದ್ದನಕೊಳ್ಳದಲ್ಲಿದೆ. ಬಾದಾಮಿಯಿಂದ ೨೨ಕಿಮಿ. ಅಂತರದಲ್ಲಿ ಸಿದ್ದನಕೊಳ್ಳ ಹಳ್ಳಿ ಇದೆ. ಈ ಗ್ರಾಮದಂಚಿನಲ್ಲಿರುವ ಬೆಟ್ಟದ ಮೇಲೇರಿ ಹೋದರೆ ವಿಶಾಲವಾದ ಬಯಲಿದ್ದು ಸುಮಾರು ೧ಕೀ.ಮೀ ದೂರದಲ್ಲಿ ಒಂದು ದೊಡ್ಡ ಕೊಳ್ಳವಿದೆ. ಆ ಕೊಳ್ಳದೊಳಗೆ ಬಾದಾಮಿ ಚಾಲುಕ್ಯರ ಕಾಲದ ಒಂದು ಶಿವ ದೇವಾಲಯ ಪಕ್ಕದಲ್ಲಿ ಸಪ್ತಮಾತೃಕೆ ಪಟ್ಟಿ ಇದೆ. ದೇವಾಲಯದೊಳಗೆ ಸೂರ್ಯನ ಮೂರ್ತಿಯೂ ಇದೆ. ದೇವಾಲಯಕ್ಕೆ ರೇಖಾನಾಗರ ಶೈಲಿಯ ಶಿಖರವೂ ಇದೆ ಇದರ ಎದುರಿನಲ್ಲಿ ಒಂದು ಅಗಲವಾದ ಗವಿ ಇದೆ. ಈ ಗವಿಯ ಬಲಬದಿಗೆ ೧೧-೧೨ ನೇ ಶತಮಾನದ ಮತ್ತೊಂದು ಕಲ್ಯಾಣ ಚಾಲುಕ್ಯರ ಶೈಲಿಯ ಶೈವ ದೇವಾಲಯವಿದೆ. ಮತ್ತು ಇದೆ ಕಾಲದ ಗಣೇಶಾನುಗ್ರಹ ಶಿವ ಭೈರವನ ಮೂರ್ತಿಗಳಿವೆ. ಈ ಗವಿಯೊಳಗೆ ನೆಲದ ಬಂಡೆಯಲ್ಲಿ ಮೇಲೆ ವಿವರಿಸಿದ ಲಜ್ಜಾಗೌರಿ ಮೂರ್ತಿಯನ್ನು ಕೆತ್ತಿದೆ. ಪಕ್ಕದಲ್ಲೇ ಚೌಕೋನ ಪೀಠದ ಮೇಲೆ ಒಂದು ಶಿವಲಿಂಗವಿದೆ. ಈ ಸ್ಥಳಗಳಲ್ಲಿಯ ಲಜ್ಜಾಗೌರಿ ಶಿಲ್ಪಗಳು ಅವುಗಳ ಲಕ್ಷಣಗಳಿಂದಲೂ ಇರುವ ಪರಿಸರದಿಂದಲೂ ಸುಮಾರು ೬-೭ನೇ ಶತಮಾನದ್ದೆಂದು ಹೇಳಬಹುದು.[೧೫] ಸಿದ್ದನಕೊಳ್ಳದ ಹಾಸು ಬಂಡೆಯ ಮೇಲೆ ಕೆತ್ತಲಾಗಿರುವ ಈ ಉಬ್ಬು ಶಿಲ್ಪವು ದೊಡ್ಡದಾಗಿದ್ದು ಸ್ಥಳೀಯ ಕಠಿಣ ಬಂಡೆಯಾಗಿರುವುದರಿಂದ ಹೆಚ್ಚಿನ ನಯ ನಾಜೂಕು ಕಂಡುಬರುವುದಿಲ್ಲ. ಆದರೆ ಆಯಾ ಪ್ರಮಾಣಗಳು ಶಾಸ್ತ್ರಕ್ಕನುಗುಣವಾಗಿಯೇ ಇವೆ ಒರಟಾದ

೧೪. ಡಾ. ಎಂ. ಚಿದಾನಂದ ಮೂರ್ತಿ(ಸಂ) : ಚಿದಾನಂದ ಸಮಗ್ರ ಸಂಪುಟ III ಜನ-ಜನಪದ-ಜಾನಪದ, ಪುಟ-೩೮೦ ಡಾ. ಅ. ಸುಂದರವರ ಲೇಖನ/ಉತ್ತರ ಕರ್ನಾಟಕದಲ್ಲಿಯ ಕೆಲವು ಪ್ರಾಚೀನ ತಾಂತ್ರಿಕ ಮೂರ್ತಿಗಳು

೧೫. ಡಾ. ಎಂ. ಚಿದಾನಂದ ಮೂರ್ತಿ(ಸಂ) : ಶಂಭಾ. ಜೋಷಿ ಅಭಿನಂಧನ ಗ್ರಂಥ ಅದ್ಯಯನ. ಪುಟ-೩೮೮ ಡಾ. ಅ. ಸುಂದರವರ ಲೇಖನ/ಉತ್ತರ ಕರ್ನಾಟಕದಲ್ಲಿಯ ಕೆಲವು ಪ್ರಾಚೀನ ತಾಂತ್ರಿಕ ಮೂರ್ತಿಗಳು

ಬಂಡೆಯ ಮೇಲೆ ಕೆತ್ತಿರುವ ಶಿಲ್ಪವು ಆಭರಣಗಳನ್ನು ಹೊಂದಿದ್ದು ಕೈಗಳಲ್ಲಿ ಮತ್ತು ತಲೆಯ ಭಾಗದಲ್ಲಿ ಕಮಲವನ್ನು ಹೊಂದಿದೆ ಕುಳಿತ ಭಂಗಿಯಲ್ಲಿರುವ ಶಿಲ್ಪದಲ್ಲಿ ಎರಡೂ ತೊಡೆಗಳನ್ನು ಅಗಲಿಸಿ ಯೋನಿ ಭಾಗವನ್ನು ಸ್ಪಷ್ಟವಾಗಿ ಕಾಣುವಂತೆ ವೈಭವೀಕರಿಸಿದ್ದಾರೆ. ಸ್ತನಗಳು ದುಂಡಾಗಿದ್ದು ಶಿಲೆಯ ಲಭ್ಯತೆಗೆ ತಕ್ಕಂತೆ ದುಂಡಗಾಗಿದ್ದು ವೃತ್ತಾಕಾರವಾಗಿದೆ.

ಇನ್ನು ಕರ್ನಾಟಕದಿಂದ ಸ್ವಲ್ಪ ಹೊರಗೆ ನಮಗೆ ಕಾಣಿಸಿಗುವುದು ಆಲಂಪುರ ಮತ್ತು ಸಂಗಮೇಶ್ವರಗಳಲ್ಲಿಯ ಲಜ್ಜಾಗೌರಿ ಶಿಲ್ಪಗಳು ಇವುಗಳಲ್ಲಿ ಆಲಂಪುರದ ಲಜ್ಜಾಗೌರಿ ಶಿಲ್ಪವು ಹೆಚ್ಚು ಪ್ರಾಚೀನವಾದುದೆಂದು ಕಂಡು ಬರುತ್ತದೆ. ಈ ಪ್ರದೇಶಗಳು ಹಿಂದೆ ಕರ್ನಾಟಕದ ಭಾಗವಾಗಿದ್ದಿರಬಹುದು.

ಮಹಾಕೂಟದಂತೆಯೇ ಒಂಬತ್ತು ಲಿಂಗಗಳುಳ್ಳ ನವಬ್ರಹ್ಮೇಶ್ವರ ಮಂದಿರವು ಆಂಧ್ರ ಪ್ರದೇಶದ ಮೆಹಬೂಬನಗರ ಜಿಲ್ಲೆಯ ಆಲಂಪುರದಲ್ಲಿದೆ. ಇದು ತುಂಗಭದ್ರಾ ತೀರದಲ್ಲಿದ್ದು ಪ್ರಸಿದ್ಧ ಶ್ರೀಶೈಲ ಕ್ಷೇತ್ರದ ಪಶ್ಚಿಮ ಧ್ವಾರವೆನ್ನಿಸಿಕೊಳ್ಳುತ್ತಿದೆ. ಮುಖ್ಯ ಬ್ರಹ್ಮೇಶ್ವರ ಮಂದಿರದ ಪಕ್ಕದಲ್ಲಿ ಜೋಗುಳಾಂಬೆಯ ಚಿಕ್ಕಗುಡಿ ಇದೆ. ಅಲ್ಲಿಯ ಮೂಲ ದೇವತೆಯೂ ಕಮಲಶಿರದ ನಗ್ನ ದಡ ರೂಪದಲ್ಲಿದ್ದಳು. ಆ ವಿಗ್ರಹವನ್ನು ತುಂಬ ಹಿಂದೆಯೇ ಸ್ಥಳಾಂತರಿಸಲಾಯಿತು. ಈಗ 'ಜೋಗುಳಾಂಬೆ' ಅಲ್ಲಿದ್ದು ಎಲ್ಲಮ್ಮನೆಂದೇ ಪೂಜಿಸಲ್ಪಡುತ್ತಾಳೆ.[೧೬]

ಆಲಂಪುರವು ಚಾಲುಕ್ಯ ಶೈಲಿಗೆ ಸೇರಿದ ದೇವಾಲಯಗಳಲ್ಲಿ ಒಂದಾಗಿದ್ದು ಹಿಂದಿನಿಂದಲೂ ಈ ಪ್ರದೇಶಗಳು ಚಾಲುಕ್ಯ ಆಡಳಿತಕ್ಕೆ ಒಳಪಟ್ಟಿದ್ದವು. ಆದರೆ ಅದಕ್ಕಿಂತಲೂ ಹಿಂದಿನಿಂದಲೇ ಈ ಪ್ರದೇಶಗಳು ತಾಂತ್ರಿಕ ಆರಾಧನೆಯ ಕೇಂದ್ರಗಳಾಗಿದ್ದವು. ಆದುದರಿಂದ ಇಲ್ಲಿ ದೊರಕಿರುವ ಸಂಗಮೇಶ್ವರದಲ್ಲಿ ಕಂಡು ಬರುವ ಲಜ್ಜಾಗೌರಿ ಶಿಲ್ಪಗಳನ್ನು ನಾಗರಾಳ ಮತ್ತು ಮಹಾಕೂಟಗಳ ಲಜ್ಜಾಗೌರಿ ಶಿಲ್ಪಗಳೊಂದಿಗೆ ನಾವು ನೋಡಬೇಕಾಗುತ್ತದೆ. ಆಲಂಪುರದ ಪಕ್ಕದಲ್ಲಿಯೇ ಸಂಗಮೇಶ್ವರ ದೇವಾಲಯುವಿದೆ. ಇಲ್ಲಿಯ ಲಜ್ಜಾಗೌರಿ ಶಿಲ್ಪವು ಹೆಚ್ಚು ಪರಿಪೂರ್ಣತೆಯನ್ನು ಹೊಂದಿದ್ದು ನಾಗರಾಳದ (ಬಾದಾಮಿ ಮ್ಯೂಜಿಯಂ) ಶಿಲ್ಪದ ಜೊತೆ ಹೋಲಿಸಿ ನೋಡಬಹುದಾಗಿದೆ ಶಿಲ್ಪಗಳು ಸ್ಪಷ್ಟವಾಗಿದ್ದು ಆಕರ್ಷಕವಾಗಿವೆ.

ಇವಲ್ಲದೆ ಸಿದ್ದನಕೊಳ್ಳದ ನೆರೆಯಗುಡ್ಡದ ಮೇಲಿನ ಸಿಬಾರಬಾಗಿಲು ಹತ್ತಿರ ಐಹೊಳೆ ಸಂಗ್ರಹಾಲಯದ ಹೊರಗೆ ೧ ಗುಲಬುರ್ಗಾ ತಾಲೂಕಿನ ಕಲ್ಲೂರ ಗ್ರಾಮದ ಒಂದು

೧೬. ಡಾ. ಜ್ಯೋತ್ಸ್ನಾಕಾಮತ್ : ಮಹಿಳೆ ಒಂದು ಅಧ್ಯಯನ, ಪುಟ-೧೬

ದೇವಾಲಯುದ ಕಂಬದ ಮೇಲೆ ಹೊಸಪೇಟೆಯು ವಾಲ್ಮೀಕಿ ಕೆರಿಯು ಬೀದಿ ಪಕ್ಕದಲ್ಲಿ ೧ ಲಜ್ಜಾಗೌರಿ ವಿಗ್ರಹಗಳಿರುವುದು ಇತ್ತೀಚೆಗೆ ನನ್ನ ಗಮನಕ್ಕೆ ಬಂದಿದೆ.[೧೭] ಎಂದು ಡಾ. ಎಂ.ಎಂ. ಕಲಬುರ್ಗಿಯುವರು ಹೇಳುತ್ತಾರೆ. ಇವಿಷ್ಟೇ ಅಲ್ಲದೇ ಇನ್ನೂ ಹಲವೆಡೆ ಉದಾ : ಚಿತ್ರದುರ್ಗದ ಕೋಟೆ ಗೋಡೆ, ಶಿಕಾರಿಪುರದ ಹುಚ್ಚರಾಯುಸ್ವಾಮಿ ದೇವಾಲಯು ಹೀಗೆ ಲಜ್ಜಾಗೌರಿಯುನ್ನು ಹೋಲುವ ಹಲವಾರು ಶಿಲ್ಪಗಳು ನಮಗೆ ಅಲ್ಲಲ್ಲಿ ಕಂಡು ಬರುತ್ತವೆ. ಆದರೆ ಇಲ್ಲಿ ಒಂದು ಮಾತಂತೂ ಸ್ಪಷ್ಟವಾಗಿ ಹೇಳಬೇಕಾಗುತ್ತದೆ, ಏಸೆಂದರೆ ಎಲ್ಲಾ ಬೆತ್ತಲೆ ಶಿಲ್ಪಗಳು ಲಜ್ಜಾಗೌರಿ ಶಿಲ್ಪಗಳಲ್ಲ, ಆದರೆ ಲಜ್ಜಾಗೌರಿ ಶಿಲ್ಪಗಳೆಲ್ಲಾ ಬೆತ್ತಲೆಯಾಗಿವೆ. ಹಾಗಿದ್ದಾಗ್ಯೂ ಈ ಶಿಲ್ಪಗಳಿಗೆ ಈ ಎಲ್ಲಾ ಲಜ್ಜಾಗೌರಿ ಶಿಲ್ಪಗಳನ್ನು ಗಮನಿಸಿ ಹೇಳುವುದಾದರೆ ಈ ಶಿಲ್ಪಗಳು ಒಂದು ನಿರ್ಧಿಷ್ಟ ಪಡಿಸಿದ ಆಕಾರ, ಅಳತೆ, ರೂಪ, ಪ್ರತಿಯೊಂದು ವಿಚಾರವನ್ನು ಸ್ಪಷ್ಟವಾಗಿ ಹೊಂದಿದೆ. ಈ ಶಿಲ್ಪಗಳು ಹೀಗೆಯೇ ಇರತಕ್ಕದ್ದು ಎಂಬ ಸ್ಪಷ್ಟವಾದ ಕಾನೂನನ್ನು ಪಾಲಿಸಿದಂತೆ ಕಂಡು ಬರುತ್ತದೆ.

ಈ ಶಿಲ್ಪಗಳು ದೊರೆತ ಸ್ಥಳಗಳು ಬೇರೆ ಬೇರೆಯಾಗಿವೆಯಾದರೂ ರೂಪ ಒಂದೇ ಇವೆ. ಇದು ಓರಿಸ್ಸಾ, ಆಂದ್ರ, ಮಹಾರಾಷ್ಟ್ರ, ಕರ್ನಾಟಕ ಹೀಗೆ ಎಲ್ಲೆಲ್ಲಿ ತಾಂತ್ರಿಕ ಆರಾಧನೆ ಅದರಲ್ಲೂ ನಾಗ ಮತ್ತು ಕೌಲಶಕ್ತಿ ಪೂಜೆ ಪ್ರಭಲವಾಗಿತ್ತೋ ಅಲ್ಲೆಲ್ಲಾ ವ್ಯಾಪಕ ಬಳಕೆಯಲ್ಲಿರುವುದು ಗಮನಕ್ಕೆ ಬರುತ್ತದೆ.

---

೧೭. ಪಿ.ಆರ್. ತಿಪ್ಪೆಸ್ವಾಮಿ (ಸಂ): ಶಿಲ್ಪ ಕಲಾ ಪ್ರಪಂಚ, ಪುಟ–೩೫೭–೩೫೯ ಡಾ. ಎಂ.ಎಂ. ಕಲಬುರ್ಗಿಯುವರ ಲೇಖನ/ ಲಜ್ಜಾಗೌರಿ

## ಅಧ್ಯಾಯ : ನಾಲ್ಕು
## ತಾಂತ್ರಿಕ ಆಚರಣೆ ಮತ್ತು ಲಜ್ಜಾಗೌರಿ ಶಿಲ್ಪಗಳು

ಲಜ್ಜಾಗೌರಿ ಶಿಲ್ಪಗಳನ್ನು ನೋಡಿದ ತಕ್ಷಣ ನಮ್ಮ ನೆನಪಿಗೆ ಬರುವುದು ತಾಂತ್ರಿಕ ಆಚರಣೆಗಳು, ತಂತ್ರದಲ್ಲಿ ರಹಸ್ಯ ಪೂಜೆಗಳು ನದಿದಂಡೆ ಸ್ಮಶಾನ, ಕೊಳ್ಳಗಳು, ಜನ ಸಾಮಾನ್ಯರು ಓಡಾಡದ ಜಾಗಗಳಲ್ಲಿ ತಂತ್ರಚಾರರು ನಡೆಸುವ ವಿವಿಧ ಕ್ರಿಯೆಗಳು, ಮದ್ಯ, ಮೈಥುನ, ನಗ್ನತೆ ಮುಕ್ತ ಲೈಂಗಿಕ ಕ್ರಿಯೆಗಳು ಬಹುಮುಖ್ಯವಾಗಿವೆ. ತಂತ್ರ ಆಚರಣೆಯಲ್ಲಿ ಹೆಣ್ಣು ಬಹುಮುಖ್ಯಪಾತ್ರ. ಈ ಎಲ್ಲಾ ಕಾರಣಗಳಿಂದಾಗಿ ಲಜ್ಜಾಗೌರಿ ಶಿಲ್ಪಗಳು ಮತ್ತು ತಂತ್ರಾಚರಣೆಯ ಮಧ್ಯ ಯಾವುದೋ ರೀತಿಯ ಸಂಬಂಧ ವಿರಲೇಬೇಕೆಂದು ನಮಗೆ ಅನಿಸುತ್ತದೆ. ಆದುದರಿಂದ ಲಜ್ಜಾಗೌರಿ ಶಿಲ್ಪಗಳನ್ನು ನಾವು ಅವಲೋಕಿಸುವ ಮೊದಲು ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಪ್ರಚಲಿತವಿರುವ ತಂತ್ರ ಪಂಥವನ್ನು ಮತ್ತು ಆ ಪಂಥದ ಹಿನ್ನೆಲೆಯನ್ನು ನಾವು ಗಮನಿಸ ಬೇಕಾಗುತ್ತದೆ.

ಇತಿಹಾಸ ಕಾಲದ ತಂತ್ರ ಪಂಥವು ತನ್ನ ವಿಚಾರಗಳಲ್ಲಿ, ಕ್ರಿಯೆಗಳಲ್ಲಿ ಸುಧಾರಿತ ಬದಲಾವಣೆಗಳನ್ನು ಮಾಡುತ್ತಿದ್ದಿತು. ಇತರ ಧರ್ಮಗಳ ಹಾಗೆ ಒಂದು ಇದು ಪ್ರತ್ಯೇಕ ಧರ್ಮವಾಗಿ ಬೆಳೆಯಲಿಲ್ಲ. ಈ ಪಂಥದಲ್ಲಿ ಮನುಷ್ಯನ ಜೀವನದಲ್ಲಿ ತನ್ನ ಮೂಲಭೂತ ಗುರಿಯು ಸಾಧನೆಯು ಮಾರ್ಗ ಇತರ ಧರ್ಮಗಳ ಮಾರ್ಗಗಳಿಗಿಂತ ಭಿನ್ನವಾಗಿದೆ....

'ತಂತ್ರಪಂಥದ' ಪ್ರಕಾರ ಸೂಕ್ಷ್ಮವಾಗಿ ನೋಡಿದಾಗ ಈ ಶಕ್ತಿ ಒಂದರೊಳಗೊಂದು ಐಕ್ಯವಾದ ಪುರುಷ-ಸ್ತ್ರೀ-ತಂತ್ರಗಳಿಂದ ಕೂಡಿದೆ. ಈ ಶಕ್ತಿ ನಮ್ಮೊಳಗೆ ಇದೆ. ಈ ಮೂಲಶಕ್ತಿಯನ್ನು ತಿಳಿಯಲು ನಮ್ಮಿಂದ ಹೊರಗೆ ನೋಡುವ ಬದಲು ಇದರ ವಿರುದ್ಧದ ದಿಕ್ಕಿನಲ್ಲಿ ನಮ್ಮೊಳಗಿರುವ ಶಕ್ತಿಯ ಕಡೆ ನಮ್ಮ ದೃಷ್ಟಿಯನ್ನು ತಿರುಗಿಸಬೇಕು. ಎಲ್ಲಿಯ ತನಕ ಈ ಶಕ್ತಿಯಲ್ಲಿರುವ ಎರಡು ತತ್ವಗಳು ಒಂದರೊಳಗೊಂದು ಐಕ್ಯವಾಗಿರುತ್ತದೆಯೋ ಅಲ್ಲಿಯ ತನಕ ಅದು ಇಂದ್ರಿಯಾತೀತ ಅನಿರ್ವಾಚನೀಯ ಆನಂದಮಯವಾಗಿರುತ್ತದೆ. ಯಾವಾಗ ಸ್ತ್ರೀ ತತ್ವ ಅಂಶ ಈ ಐಕ್ಯತೆಯಿಂದ ಬೇರೆಯಾಗುವುದೋ ಆಗಿನಿಂದ ಸೃಜನ ಕಾರ್ಯ ಆರಂಭವಾಗುತ್ತದೆ. ಈ ಸೃಷ್ಟಿ ನಮ್ಮ ಇಂದ್ರಿಯಗಳ ಅನುಭವಕ್ಕೆ ಬಂದಾಗ ಅವು ಸ್ಪಷ್ಟವಾಗಿ ಪ್ರತ್ತೇಕವಾಗಿ ಕಾಣುತ್ತವೆ. ಸ್ತ್ರೀ ತತ್ವ ಗರ್ಭದಿಂದ ಹೊರಬೀಳುತ್ತದೆ, ಅದರಲ್ಲಿ ಬೆಳೆಯುತ್ತದೆ, ಕ್ರಮೇಣ ಅಡಗಿ ಹೋಗುತ್ತದೆ, ಆದ್ದರಿಂದ ಕಾಲವನ್ನು ಸ್ತ್ರೀ ರೂಪದಲ್ಲಿ ತೋರಿಸಲಾಗುತ್ತದೆ.[೧೧]

ಈ ತತ್ವ ಪ್ರತೀಕವಾದ ಸ್ತ್ರೀಯು ತುಂಬ ಚೆಲುವಾಗಿಯೂ ಆಕರ್ಷಕವಾಗಿರುವ ಕುಮಾರಿಯೂ ವಾತ್ಸಲ್ಯದ ಮಾತೆಯೂ ಲಯಕರ್ತಳಾದ ಭಯಂಕರ ಸ್ವರೂಪಿಯೂ, ಕಾಳಿಯೂ ಆಗಿದ್ದಾಳೆ. ಈ ಸೃಷ್ಟಿಯ ವೈವಿಧ್ಯತೆಯಲ್ಲಿ ನಮ್ಮ ಇಂದ್ರಿಯಗಳು ತಲ್ಲೀನವಾಗಿ ಶಕ್ತಿಯನ್ನು ಕ್ರಮೇಣವಾಗಿ ಕಳೆದುಕೊಂಡು ನಾವು ನಶಿಸಿ ಹೋಗುತ್ತೇವೆ. ಸೃಷ್ಟಿಯ ಹಂತದವರೆಗಿನ ಕ್ರಿಯಾ ಮಾರ್ಗದಲ್ಲಿ ನಮ್ಮ ಇಂದ್ರಿಯ ಶಕ್ತಿಯನ್ನೆಲ್ಲಾ ಒಟ್ಟುಗೂಡಿಸಿ ಈ ಸ್ತ್ರೀ ತತ್ವ ಶಕ್ತಿಯನ್ನು ಕ್ರಮವಾಗಿ ಹಿಂತುರುಗಿಸಿ ಹರಿಯುವ ಹಾಗೆ ಮಾಡಿ ಮೂಲದಲ್ಲಿರುವ ಪುರುಷ ತತ್ವ ಶಕ್ತಿಯೊಡನೆ ಬೆರೆಯುವ ಹಾಗೆ ಮಾಡಬೇಕು. ನಮ್ಮ ಇಂದ್ರಿಯ ಶಕ್ತಿಗಳನ್ನು ಬೆಳಸಿಕೊಂಡು ಅವುಗಳ್ನು ಸರಿಯಾಗಿ ಪ್ರಚೋದಿಸಿದಾಗ ಉದ್ಭವಿಸುವ ಶಕ್ತಿಯು ಮಹತ್ವವಾದದ್ದು ಅದನ್ನು ಒಂದೇ ಕಡೆ ಕೇಂದ್ರಿಕರಿಸಿ ಅದು ಹೀಗೆ ನಮ್ಮ ನರಮಂಡಲದಲ್ಲಿ ಬೆನ್ನೆಲುಬಿನ ಮೂಲಕ ಮೆದುಳಿನಿಂದ ಗುದದವರೆಗೆ ಇರುವ ಒಂದು ಪ್ರಧಾನ ನಾಡಿ ಇದೆ. ಇದನ್ನು ಯೋಗದಲ್ಲಿ 'ಸುಷುಮ್ನಾ'ನಾಡಿ ಎಂದು ಹೆಸರಿಸಲಾಗಿದೆ. ಈ ಸುಷುಮ್ನಾನಾಡಿಯ ಬುಡದಲ್ಲಿ ಸುಪ್ತವಾಗಿರುವ ಸ್ತ್ರೀ ತತ್ವ ಶಕ್ತಿಯನ್ನು ಪ್ರಚೋದಿಸಿ ಅದರ ಶಕ್ತಿಯು ಕ್ರಮೇಣ ಮೇಲ್ಮುಖವಾಗಿ ಹರಿಯುವ ಹಾಗೆ ಮಾಡಬೇಕು. ಕೊನೆಯಲ್ಲಿ ಈ ಶಕ್ತಿಯ ಮೆದುಳಿನಲ್ಲಿರುವ ಪುರುಷ ತತ್ವ ಶಕ್ತಿಯೊಡನೆ ಸಂಯೋಗವಾದಾಗ ಮೊದಲಿನಂತೆ ಆ ಶಕ್ತಿ ಪರಿಪೂರ್ಣವಾಗಿ ನಿರಂತರ ಇಂದ್ರಿಯತೀತವಾದ ಆನಂದ ಮಯವಾಗುತ್ತದೆ. ಈ ಮಿಲನದಿಂದ ಉದ್ಭವಿಸುವ ರಸಾಶಕ್ತಿ ಮಾನವನ ಇಡೀ

೧೧. ಡಾ. ಎಂ. ಚಿದಾನಂದಮೂರ್ತಿ (ಸಂ): ಶಂಭಾ. ಜೋಶಿ ಅಭಿನಂದನ ಗ್ರಂಥ ಅಧ್ಯಯನ, ಪುಟ-೩೮೧ ಡಾ. ಅ. ಸುಂದರವರ ಲೇಖನ/ಉತ್ತರ ಕರ್ನಾಟಕದಲ್ಲಿಯ ಕೆಲವು ಪ್ರಾಚೀನ ತಾಂತ್ರಿಕ ಮೂರ್ತಿಗಳು

ದೇಹ ಮನುಷ್ಯನ ಮೇಲೆ ವಿಶಿಷ್ಟ ಪರಿಣಾಮವನ್ನುಂಟು ಮಾಡಿ ಅವನಿಗೆ ಒಂದು ದಿವ್ಯ ವ್ಯಕ್ತಿತ್ವವನ್ನುಕೊಡುತ್ತದೆ. ಈ ಆನಂದಮಯ ಉದಾತ್ತ ವ್ಯಕ್ತಿತ್ವವನ್ನು ಪಡೆಯುವುದೇ ಮಾನವನ ಗುರಿ.[೨] ಎಂಬ ಮಾತುಗಳು ಅರ್ಥಪೂರ್ಣವಾಗಿವೆ.

ಭಾರತದ ಇತಿಹಾಸದಲ್ಲಿ ನೋಡಿದರೆ ಅಥರ್ವವೇದ, ಉಪನಿಷಥ್‌ಗಳಿಂದ ಹಿಡಿದು ಎಲ್ಲದರಲ್ಲೂ ಪಾರಮಾರ್ಥಿಕ ಗುರಿಯನ್ನು ಸಾದಿಸುವುದರ ಕುರಿತು ಎಲ್ಲೆಡೆ ನಮಗೆ ಸಾಕಷ್ಟು ವಿಚಾರಗಳು ಕಂಡುಬರುತ್ತವೆ. ಎಲ್ಲದರ ಗುರಿಯೂ ಪರಮಾರ್ಥ ಸಾಧನೆಯಾಗಿದೆ. (Eternity) ಅಲೌಕಿಕ ಆನಂದವನ್ನು ಪಡೆಯಲು ಒಂದೊಂದು ಗ್ರಂಥಗಳಲ್ಲಿ ಒಬ್ಬೊಬ್ಬ ಋಷಿಯೂ, ಒಂದೊಂದು ಮಾರ್ಗವನ್ನು ಹೇಳಿದ್ದಾನೆ. ಆದರೆ ತಂತ್ರಮಾರ್ಗವನ್ನು ಕುರಿತು ಹೇಳುವುದಾದರೆ ಇದಕ್ಕೆ ಇವರೇ ಎಂದು ಹೇಳುವಂತಹ ಅಧಿಕಾರಿಯೂ ಸಿಗುವದಿಲ್ಲ. ಆದರೆ ಇದು ಸರ್ವಸಾಧು ಜನ ಒಪ್ಪಿತವಾಗಿರುವ ಪ್ರತಿಯೊಬ್ಬ ಮುನಿಯೂ ತನ್ನ ಆತ್ಮೋನ್ನತಿಗಾಗಿ ಕಂಡುಕೊಂಡ ದಾರಿ ಎಂದು ಹೇಳಬಹುದು. ಮನುಷ್ಯನ ದೇಹ ಎಂಬುದು ಕೇವಲ ಮೂಳೆ ಮಾಂಸಗಳ ಗೂಡಾಗಿರದೆ ಇದು ಒಂದು ಶಕ್ತಿಯ ಆಕರ ಇದರಲ್ಲಿ ಬಹಳಷ್ಟು ರಹಸ್ಯಗಳು ಅಡಗಿವೆ. ಈ ಭೂಮಿಯ ಮೇಲೆ ಮನುಷ್ಯ ಜೀವಿಸಿರಲು ಅದಕ್ಕೆ ಹೀಗೆ ಬಹಳಷ್ಟು ಕಾರಣಗಳಿವೆ. ಅದೇ ರೀತಿ ಉಸಿರಾಡುವ ಮನುಷ್ಯ ಆ ರೀತಿ ಇರುವುದು ಈ ಕೂಡಾ ಕೇವಲ ಯಾಂತ್ರಿಕವಲ್ಲ ಎಂಬುದು ಮಾನವ ಕಂಡು ಕೊಂಡ ಸತ್ಯ, ಹೀಗೆ ಹುಡುಕಾಟ ನಡೆಸಿದಾಗ ಆತನಿಗೆ ಹಲವಾರು ವಿಚಾರಗಳು ಗೋಚರವಾಗುತ್ತವೆ.

ಅದೇ ರೀತಿ ಹುಡುಕಾಡುವ ಮನುಷ್ಯ ತನ್ನ ಒಳಗೆ ಹುಡುಕಾಟಕ್ಕೆ ತೊಡಗಿದಾಗ ಕಂಡು ಬಂದ ಹಲವಾರು ಸತ್ಯ ಕುಂಡಲಿನೀ ಚಕ್ರ ಇತ್ಯಾದಿಗಳು ಇಂತಹ ಹಲವಾರು ವಿಚಾರಗಳ ಗಮನಕ್ಕೆ ಬರುತ್ತವೆ. ಇವುಗಳಲ್ಲಿ ಅತ್ಯಂತ ಮುಖ್ಯವಾದುದು ಕುಂಡಲನೀ ಚಕ್ರ, ಯೋಗಶಾಸ್ತ್ರದಲ್ಲಿ ಗುಥ ಪ್ರದೇಶದಲ್ಲಿ ಸೂಪ್ತವಾಗಿರುವ ಸ್ತ್ರೀ ತತ್ವ ಶಕ್ತಿಯನ್ನು 'ಕುಂಡಲಿನೀ' ಎಂದು ಹೇಳಲಾಗಿದೆ. ಇದನ್ನು ಹೆಣ್ಣು ಸರ್ಪದ ಸಂಕೇತದಿಂದ ಸೂಚಿಸಲಾಗಿದೆ. ಈ ಶಕ್ತಿಯನ್ನು ಸುಷಮ್ನಾನಾಡಿಯ ಮೂಲಕ ಮೇಲೆರಿಸುತ್ತಿರುವಂತೆಯೇ ಮೊದಲಿನಿಂದ ಎರಡು ಹಂತಗಳಲ್ಲಿ ಶುದ್ಧಿಯಾಗುತ್ತಾ ದಿವ್ಯವಾಗುತ್ತಾ ಕೊನೆಯ ಹಂತವಾದ ಸಹಸ್ರದಳದಲ್ಲಿ ಪುರುಷ ತತ್ವದಲ್ಲಿ ಸೇರಿ ಒಂದಾಗುತ್ತದೆ. ಆದ್ದರಿಂದ "ತಂತ್ರಪಂಥ"ದ ಸಾಧನೆಯಲ್ಲಿ ಯೋಗಕ್ಕೆ ವಿಶೇಷ ಮಹತ್ವವಿದೆ. ಈ ಆರು

---

೦೨. ಡಾ. ಎಂ. ಚಿದಾನಂದಮೂರ್ತಿ (ಸಂ): ಶಂಭಾ. ಜೋಶಿ ಅಭಿನಂದನ ಗ್ರಂಥ ಅಧ್ಯಯನ, ಪುಟ-೩೮೧-೩೮೨ ಡಾ. ಅ. ಸುಂದರವರ ಲೇಖನ/ಉತ್ತರ ಕರ್ನಾಟಕದಲ್ಲಿಯ ಕೆಲವು ಪ್ರಾಚೀನ ತಾಂತ್ರಿಕ ಮೂರ್ತಿಗಳು

ಹಂತಗಳನ್ನು ಚಕ್ರಗಳೆಂದು ಕರೆಯಲಾಗಿದೆ. ಇವುಗಳು "ಮೂಲಾಧಾರ ಚಕ್ರ" (ಗುದಸ್ಥಾನ) ಸ್ವಾಧಿಷ್ಠಾನ ಚಕ್ರ(ಜನೇಂದ್ರಿಯ ಸ್ಥಾನ) "ಮಣಿಪೂರ ಚಕ್ರ" (ನಾಭಿಸ್ಥಾನ) "ಅನಾಹತ ಚಕ್ರ" (ಎದೆಸ್ಥಾನ) "ವಿಶುದ್ಧ ಚಕ್ರ" (ಕಂಠಸ್ಥಾನ ಆಜ್ಞಾ ಚಕ್ರ (ಹುಬ್ಬಗಳ ಮಧ್ಯೆ) "ಸಹಸ್ರದಳ ಚಕ್ರ" (ಮಿದುಳು)[೩] 'ತಂತ್ರಪಂಥ'ದ ಪ್ರಕಾರ ಈ ಗುರಿಯ ಸಾಧನೆಯಲ್ಲಿ ಇಂದ್ರಿಯ ನಿಗ್ರಹಕ್ಕೆ ಬದಲಾಗಿ ಅವುಗಳ ಶಕ್ತಿಯ ವರ್ಧನೆ, ಪ್ರಚೋದನೆಗೆ ಸಂಪೂರ್ಣ ಅವಕಾಶವಿದೆ. ಪುರುಷ-ಸ್ತ್ರೀ ತತ್ವಶಕ್ತಿಗಳ ನಿರಂತರ ಮಿಲನವೇ ಗುರಿಯಾದ್ದರಿಂದ ಮಾನವನ ಪ್ರಾಪಂಚಿಕ ಜೀವನದಲ್ಲಿ ಇದರ ಬಾಹ್ಯ ರೂಪವಾಗಿರುವ ಪ್ರತ್ಯಕ್ಷ ಪುರುಷ-ಸ್ತ್ರೀ ಮಿಲನವು ಈ ಗುರಿಯನ್ನು ಸಾಧಿಸಲು ಸಹಾಯ ಮಾಡುತ್ತದೆ. ಆದ್ದರಿಂದ ಸಂಭೋಗವು ಸಾಧನೆಯ ಪ್ರಮುಖ ಅಂಗ, ಇದರ ಜೊತೆಗೆ ಇಂದ್ರಿಯಗಳ ಶಕ್ತಿವರ್ಧನೆ ಮತ್ತು ಪ್ರಚೋಧನೆಗೆ ಮಾಂಸ, ಮಾಷ (ಉದ್ದು) ದಿಂದ ಮಾಡಿದ ಪದಾರ್ಥ ಮೀನೂ ತಿನ್ನುವಿಕೆ ಮತ್ತು ಮಧ್ಯ ಕುಡಿಯುವಿಕೆ (ಇವೆಲ್ಲವನ್ನು ಸೇರಿಸಿ 'ಪಂಚ' "ಮಕಾರ"ಗಳೆಂದು ಹೇಳುವ ವಾಡಿಕೆಯಿದೆ) ಸಾಧನೆಯಲ್ಲಿ ಅವಶ್ಯ ಇವುಗಳ ಸೇವನೆ, ಸಂಭೋಗ ಕ್ರಿಯೆ. ಸಂಗೀತವಾದನ ಇವುಗಳೆಲ್ಲ ಪೂಜೆಗಳ ಅಂಗಗಳು. ಈ ಕ್ರಿಯೆಗಳ ನಂತರ ಪುರುಷ-ಸ್ತ್ರೀ ತತ್ವಗಳ ಸಂಕೇತಗಳಿಂದ ರೂಪಿತವಾದ ವಿಗ್ರಹಗಳ, ಯಂತ್ರಗಳ ಚಕ್ರಗಳ ಪೂಜೆಯನ್ನು ಬೀಜಾಕ್ಷರ ಮಂತ್ರಗಳಿಂದ ತಾಂತ್ರಿಕನು ನಡೆಸುತ್ತಾನೆ. ಆದ್ದರಿಂದ ಅವನಿಗೆ ತನ್ನ ಸಾಧನೆಯಲ್ಲಿ ಸ್ತ್ರೀಯ ಸಹಕಾರ, ಸಹಾಯ ಅತ್ಯಗತ್ಯ. ಸಾಮಾನ್ಯವಾಗಿ ಕೆಳವರ್ಗ ಸ್ತ್ರೀ ಹೆಚ್ಚು ಅನುಕೂಲವಾಗಿರುತ್ತಾಳೆ ಮತ್ತು ತಾಂತ್ರಿಕ ವಿಧಾನ ಮತ್ತು ಮಂತ್ರಗಳ ಉಪದೇಶವನ್ನು ತಾಂತ್ರಿಕ ಸ್ತ್ರೀಯೋಗಿನಿಯೇ ಹೆಚ್ಚಾಗಿ ಕೊಡುತ್ತಾಳೆ. ಅವಳಲ್ಲಿ ಸ್ತ್ರೀತತ್ವದ ದೈವಿಕತೆಯನ್ನು ಕಾಣಲು ಪ್ರಯತ್ನಿಸುತ್ತಾನೆ. ಈ ಪಂಥದಲ್ಲಿ ಜಾತಿಯತೇಯಿಲ್ಲ. ಈ ಪೂಜೆಯಲ್ಲಿ ಗಂಡು-ಹೆಣ್ಣು ಪೂಜೆಯಲ್ಲಿ ಜೊತೆಯಾಗಿ ಭಾಗವಹಿಸುತ್ತಾರೆ.[೪] ಇದು ಒಂದು ವಿಧದಲ್ಲಿ ಹೇಳುವುದಾದರೆ ದೇವಿಯನ್ನು ತೃಪ್ತಿ ಪಡಿಸುವುದಕ್ಕೆ ಆ ಮೂಲಕ ನಿಜ ಆನಂದಾನುಭವವನ್ನು ಕಂಡು ಕೊಳ್ಳುವುದಕ್ಕೆ (ಅನುಭವಿಸುವುದಕ್ಕೆ) ಸಹಕಾರಿಯಾಗುವ ಒಂದು ಮಾರ್ಗವಾಗಿದೆ.

ನಮ್ಮ ಪುರಾಣಗಳಲ್ಲಿ ಕಂಡುಬರುವ ಹಲವಾರು ಕಥೆಗಳನ್ನು ಗಮನಿಸಿದರೆ ಅಲ್ಲಿಯ ನಾಯಕ ನಾಯಕಿಯರನ್ನು ಗಮನಿಸಿದರೆ ನಮಗೆ ತಿಳಿದು ಬರುವುದು. ಶೃಂಗಾರಕ್ಕೆ ಕೊಟ್ಟ

---

೦೩. ಡಾ. ಎಂ. ಚಿದಾನಂದಮೂರ್ತಿ (ಸಂ): ಶಂಭಾ. ಜೋಶಿ ಅಭಿನಂದನ ಗ್ರಂಥ ಅಧ್ಯಯನ, ಪುಟ-೩೮೨ ಡಾ. ಅ. ಸುಂದರವರ ಲೇಖನ/ಉತ್ತರ ಕರ್ನಾಟಕದಲ್ಲಿಯ ಕೆಲವು ಪ್ರಾಚೀನ ತಾಂತ್ರಿಕ ಮೂರ್ತಿಗಳು

೦೪. ಡಾ. ಎಂ. ಚಿದಾನಂದಮೂರ್ತಿ (ಸಂ): ಶಂಭಾ. ಜೋಶಿ ಅಭಿನಂದನ ಗ್ರಂಥ ಅಧ್ಯಯನ. ಪುಟ-೩೮೨-೩೮೩ ಡಾ. ಅ. ಸುಂದರವರ ಲೇಖನ/ಉತ್ತರ ಕರ್ನಾಟಕದಲ್ಲಿಯ ಕೆಲವು ಪ್ರಾಚೀನ ತಾಂತ್ರಿಕ ಮೂರ್ತಿಗಳು

ಮಹತ್ವವಾಗಿದೆ. ಶೃಂಗಾರ ಮತ್ತು ರತಿಗಳಲ್ಲಿ ರತಿ ಅನ್ನುವುದು ಭಾವವಾದರೆ ಅದರಿಂದ ಉತ್ಪನ್ನವಾಗುವ ರಸ ಶೃಂಗಾರವಾಗುತ್ತದೆ. ಈ ಶೃಂಗಾರ ರಸವು ನವರಸಗಳಲ್ಲಿ ಮೊದಲನೆಯ ರಸವಾಗಿದ್ದು. ನಮ್ಮ ಪುರಾಣಗಳಲ್ಲಿ ಪ್ರಥಮ ಪ್ರಾಶಸ್ತ್ಯವನ್ನು ಪಡೆದಿದೆ. ಇಲ್ಲಿ ಬರುವ ಶಿವ-ಪಾರ್ವತಿ, ರತಿ-ಮನ್ಮಥ, ವಿಷ್ಣು-ಲಕ್ಷ್ಮೀ, ರಾದಾ-ಕೃಷ್ಣ, ಹೀಗೆ ಪ್ರತಿಯೊಬ್ಬ ದೇವ ದೇವತಿಯರಿಗೆ ಇದು ಒಂದು ರೀತಿಯಲ್ಲಿ ನಾವು ಒಪ್ಪಿಕೊಂಡ ಮಾದರಿ ಜೋಡಿ ದೇವತೆಗಳಾಗಿವೆ. ಇವುಗಳಲ್ಲಿ ರಾದಾ-ಕೃಷ್ಣ ಪ್ರೇಮಕ್ಕೆ ಮಾದರಿಗಳಾದರೆ ರತಿ-ಮನ್ಮಥರು ಶೃಂಗಾರಕ್ಕೆ ಆದರ್ಶರಾಗುತ್ತಾರೆ. ಆದರೆ ಇಲ್ಲಿ ಶಿವ-ಪಾರ್ವತಿಯರದ್ದು ಮಾತ್ರ ವಿಭಿನ್ನವಾಗಿ ನಿಲ್ಲುತ್ತದೆ. ಸಾಮಾನ್ಯ ಜನರ ನಂಬಿಕೆಯಲ್ಲಿ ಇವರದೂ ಆದರ್ಶ ಜೋಡಿಯಾಗಿದೆ ಆದರು ವಿಶಿಷ್ಟಾರ್ಥದಲ್ಲಿ ಮತ್ತು ಅಲೌಕಿಕ ಸಾಧನೆಯ ದಾರಿಯಲ್ಲಿ ಇದು ಪ್ರಕೃತಿ ಪುರುಷರ ಜೋಡಿ ತಾಂತ್ರಿಕ ಅರ್ಥದಲ್ಲಿ ಇದುವೇ ಶಿವ-ಶಕ್ತಿಯರ ಸಂಗಮವಾಗುತ್ತದೆ. ಇದಕ್ಕೆ ಕಾರಣ ಶಿವ ಎಂಬುದು ಸೃಷ್ಟಿ ಕಾರಣವಾದರೆ ಶಕ್ತಿಯು ಸೃಷ್ಟಿಯ ಕ್ಷೇತ್ರವಾಗಿ ಮಾತ್ರವಲ್ಲದೆ ಪಾಲನಾ ಕರ್ತೆಯಾಗಿ ಕಾಣಿಸುವುದರಿಂದ ಶಿವನಿಗಿಂತಲೂ ಶಕ್ತಿಯ ಪಾತ್ರಕ್ಕೆ ಹೆಚ್ಚಿನ ಮಹತ್ವವಿದೆ. ಆದುದರಿಂದ ತಂತ್ರಾಚರಣೆಯ ಪಂಥದಲ್ಲಿ ಸ್ತ್ರೀ ಎಂಬುದಕ್ಕೆ ಶಕ್ತಿ ಎಂಬ ಪರ್ಯಾಯ ಅರ್ಥವೇ ವ್ಯಾಪಕ ಅರ್ಥದಲ್ಲಿ ಬೆಳೆದು ಬಂದಿದೆ.

ಪುರುಷ-ಸ್ತ್ರಿ ತತ್ವಗಳ ಮಿಲನದ ಸಂಕೇತ ಪಾರ್ವತಿ-ಶಿವ, ರಾದಾ-ಕೃಷ್ಣ, ಪೀಠಸ್ಥಲಿಂಗ, ಕೇಂದ್ರದಲ್ಲಿ ಚುಕ್ಕಿಯುಳ್ಳ ತ್ರಿಕೋಣ, ಕಮಲಪುಷ್ಪ, ಸಂಭೋಗಾವಸ್ಥೆಯಲ್ಲಿರುವ ಸ್ತ್ರೀ ಪುರುಷರು, ಯಂತ್ರ-ಚಕ್ರಗಳು ಅಲ್ಲದೆ ಪ್ರಚೋಧನಾತ್ಮಕ ಸೃಜನಶಕ್ತಿ ತತ್ವದ ಸಂಕೇತವಾದ ಸಂಭೋಗಾಸನದಲ್ಲಿರುವ ನಗ್ನ ಸ್ತ್ರೀ, ಕಲ್ಲುಗುಡ್ಡಗಳಲ್ಲಿ ಆಳವಾದ ಕಣಿವೆ, ಶಂಖ (ಇವೆಲ್ಲಾ ಯೋನಿಯಾಕಾರದಲ್ಲಿರುತ್ತವೆ). ಇವೇ ಮೊದಲಾದವುಗಳನ್ನು, ತ್ರಿಪುರ ಸುಂದರಿ, ಕಾಳಿ ಮೊದಲಾದ ದೇವಿಯರ ಮನೋಹರ ಹಾಗೂ ಭಯಂಕರ ಮೂರ್ತಿಗಳನ್ನು ಗುಪ್ತವಾಗಿ ನಿರ್ಜನ ಪ್ರದೇಶ, ಸ್ಮಶಾನ, ಮುಂತಾದ ಪ್ರದೇಶಗಳಲ್ಲಿ ತಾಂತ್ರಿಕರು ಪೂಜಿಸುತ್ತಾರೆ. ಉದ್ರೇಕಗೊಂಡ ಶಕ್ತಿಯನ್ನು ಒಟ್ಟು ಗೂಡಿಸಿ ಮೂಲಾಧಾರ ಚಕ್ರದಿಂದ ಮೇಲೆ ಮೇಲಕ್ಕೆ ಕ್ರಮವಾಗಿ ಏರಿಸಲು ಸೂಕ್ತವಾದ ಯೋಗಾಸನಗಳನ್ನು ಹಾಕುತ್ತಾರೆ. ಹೀಗೆ ಹಲವಾರು ವರ್ಷಗಳ ಸತತ ಸಾಧನೆಯಿಂದ ತಮ್ಮ ಗುರಿ ಮುಟ್ಟಲು ಪ್ರಯತ್ನಿಸುತ್ತಾರೆ.[೫]

ಭಾರತದ ಪವಿತ್ರ ಸಾಹಿತ್ಯದಲ್ಲಿ ಶೃತಿ, ಸ್ಮೃತಿ, ಪುರಾಣಗಳ ಬಳಿಕ ತಂತ್ರಶಾಸ್ತ್ರದ ಸ್ಥಾನ ಬರುತ್ತದೆ. ಇದರ ಉಗಮ, ವೇದಗಳಷ್ಟೇ ಹಳೆಯದು ತಂತ್ರಾಗಮಗಳಲ್ಲಿದ್ದು, ಶೈವ, ವೈಷ್ಣವ,

೦೫. ಡಾ. ಎಂ. ಚಿದಾನಂದಮೂರ್ತಿ (ಸಂ): ಶಂಭಾ. ಜೋಶಿ ಅಭಿನಂದನ ಗ್ರಂಥ ಅಧ್ಯಯನ. ಪುಟ-೩೮೩ ಡಾ. ಅ.ಸುಂದರವರ ಲೇಖನ/ಉತ್ತರ ಕರ್ನಾಟಕದಲ್ಲಿಯ ಕೆಲವು ಪ್ರಾಚೀನ ತಾಂತ್ರಿಕ ಮೂರ್ತಿಗಳು

ಜೈನ, ಬೌದ್ಧ ಧರ್ಮಗಳು, ತಂತ್ರಶಾಸ್ತ್ರದ ಹಲವಾರು ಅಂಶಗಳನ್ನು ಹೊಂದಿವೆ. ತಾಂತ್ರಿಕರಲ್ಲಿ ಸೃಜನಶಕ್ತಿಯುಳ್ಳ ಸ್ತ್ರೀಗೆ ಉನ್ನತ ಸ್ಥಾನವಿದೆ. ಸ್ತ್ರೀರೂಪಿ ಶಕ್ತಿ ಪೂಜೆಗೆ ಪ್ರಾಧ್ಯಾನ್ಯ ಹೀಗಾಗಿ ಅವರು 'ಶಾಕ್ತ'ರೆನಿಸಿಕೊಳ್ಳುತ್ತಾರೆ. ಸ್ತ್ರೀ ತತ್ವಶಕ್ತಿಯು ಎಲ್ಲ ಸೃಷ್ಟಿಗೂ ಮೂಲವಾಗಿ ಯೋನಿ ರೂಪದಲ್ಲಿ ಆಕೆಯನ್ನು ಪೂಜಿಸುವುದು ಸಾಮಾನ್ಯ ಯೋನಿ ರೂಪವೇ ಸೃಷ್ಟ್ಯಾತ್ಮಕ ಪರತತ್ವದ ಸಂಕೇತವಾಗಿದೆ. ಸೃಷ್ಟಿಕರ್ತೆಯಂತೆ ಲಯಕಾರಣಿಯೂ ಆಗಿದ್ದ ಶಕ್ತಿಯ ಪೂಜೆ ಭಾರತಾದ್ಯಂತ ವಿವಿಧ ರೂಪಗಳಲ್ಲಿ ನಡೆದುಬಂದಿತು.[೬]

ನಮ್ಮ ದೇಶದ ಇತಿಹಾಸದಲ್ಲಿ ಮೂರ್ತಿಗಳ ಪೂಜೆ ಬಹಳ ಪ್ರಾಚೀನವಾದುದು. ಇಲ್ಲಿ ನಾವು ಗಮನಿಸಬೇಕಾದುದು ಶಿವ ಮತ್ತು ಶಕ್ತಿಯನ್ನು ಸಂಜ್ಞೆಗಳ ಮೂಲಕ ಚಿತ್ರಿಸಿರುವುದು. ಇವುಗಳಲ್ಲಿ ಮುಖ್ಯವಾಗಿ ಲಿಂಗ ಮತ್ತು ಯೋನಿಯ ರೂಪದಲ್ಲಿ, ಇವು ಶಿಲ್ಪಗಳು ಮಾತ್ರವಲ್ಲ. ಚಿತ್ರಗಳ ರೂಪದಲ್ಲಿಯೂ ಇವೆ. ಬಹುಶಃ ಶಿಲ್ಪಗಳಿಗಿಂತಲೂ ಮೊದಲು ಇವು ಚಿತ್ರಗಳ ರೂಪದಲ್ಲಿಯೇ ಬಂದಿರಬೇಕೆನ್ನಿಸುತ್ತದೆ. ಅವುಗಳನ್ನು ಇಂದು ನಾವು ಯಂತ್ರಗಳೆಂದು ಹೇಳುತ್ತೇವೆ. ಚಕ್ರಗಳೆಂದೂ ಹೇಳುವುದಿದೆ. ಇವು ಮುಖ್ಯವಾಗಿ ತ್ರಿಕೋನ, ಚೌಕಕೋನ, ಷಟ್ಕೋನ, ವೃತ್ತ ಇತ್ಯಾದಿಗಳು. ತ್ರಿಕೋನ-ಇವುಗಳು ಎರಡು ರೀತಿಯಲ್ಲಿವೆ. ಒಂದು ತುದಿ ಬಿಂದುವು ಮೇಲ್ಮುಖವಾಗಿ ಇರುವುದು. ಇದು ಪುರುಷನನ್ನು (ಲಿಂಗ) ಸೂಚಿಸುತ್ತದೆ. ಇನ್ನೊಂದು ತ್ರಿಕೋನದ ತುದಿ ಬಿಂದುವು ಕೆಳ ಮುಖವಾಗಿರುವುದು. ಇದು ಸ್ತ್ರೀಯನ್ನು (ಯೋನಿ) ಸಂಕೇತಿಸುತ್ತದೆ. ಒಂದೇ ಚಿತ್ರದಲ್ಲಿ ಮೇಲ್ಮುಖ ಮತ್ತು ಕೆಳಮುಖ ತ್ರಿಕೋನಗಳು ಒಂದರೊಳಗೊಂದು ಬೆಸೆದು ಕೊಂಡಿದ್ದರೆ ಅದು ಮಿಲನ ಹಾಗೂ ಮಧ್ಯದಲ್ಲಿ ಬಿಂದುವು ಚಿತ್ರಿಸಿದ್ದರೆ ಅದು ಅಂಡ. ಚಿತ್ರದ ಹೊರಗಡೆ ವೃತ್ತರಚಿಸಿದ್ದರೆ ಅದು ಬ್ರಹ್ಮಾಂಡ. ಈ ರೀತಿಯಾಗಿ ವಿಭಿನ್ನ ಅರ್ಥಗಳಿವೆ. ತಂತ್ರದಲ್ಲಿ ಈ ಚಿನ್ಹೆಗಳು ಬಹಳ ಪ್ರಮುಖ ಪಾತ್ರವಹಿಸುತ್ತವೆ.

ಇನ್ನು ವಿಸ್ತಾರವಾಗಿ ನೋಡಿದರೆ ಇಲ್ಲಿ (ತಂತ್ರಮಾರ್ಗದಲ್ಲಿ) ಕೆಳಮುಖ ತ್ರಿಕೋನಕ್ಕೆ ವಿಶೇಷ ಮಹತ್ವವಿದೆ. ಇದನ್ನು ಶ್ರೀ ಚಕ್ರವೆಂದು ತಂತ್ರದಲ್ಲಿ ಹೇಳಲಾಗಿದೆ. "ಚಕ್ರ ಎಂದರೆ ಗತಿಗೆ ಕೊಟ್ಟ ಆಕೃತಿ. ಇನ್ನೊಂದು ಅರ್ಥದಲ್ಲಿ ಗತಿಗೆ ಕೊಟ್ಟ ಸಂಕೇತಕ್ಕೆ ನಾವು ಉಪಾಸನೆಯ ಪರಿಭಾಷೆಯಲ್ಲಿ ಚಕ್ರ ಎನ್ನುತ್ತೇವೆ. ಚಕ್ರವು ಶಕ್ತಿಯು ಸಂಕೇತವಾಗಿರುವುದರಿಂದ ಶಕ್ತಿಗೆ ಆಕಾರ ಐಚ್ಛಿಕವಾಗಿದೆ. ಆದ್ದರಿಂದ ಸಂಕೇತವೂ ಐಚ್ಛಿಕವೆ ಎಲ್ಲ ಆಕಾರವೂ ಯಂತ್ರವೇ ಎಲ್ಲ ಯಂತ್ರಗಳು ಶಕ್ತಿಯು "ಸಂಕೇತಗಳೆ".[೭]

೦೬. ಡಾ. ಜ್ಯೋತ್ಸ್ನಾಕಾಮತ್ : ಮಹಿಳೆ ಒಂದು ಅಧ್ಯಯನ, ಪುಟ-೧೯
೦೭. ಸತ್ಯಕಾಮ : ತಂತ್ರಯೋನಿ, ಪುಟ-೨೩೪-೨೩೫

ತಂತ್ರಮಾರ್ಗದಲ್ಲಿ ನಮಗೆ ಕಂಡುಬರುವ ಚಿನ್ಹೆಗಳಾದ ತ್ರಿಕೋನಗಳು ಷಟ್ಕೋನ ಚೌಕ ವೃತ್ತ ಬಿಂದು ಮುಂತಾದವುಗಳಲ್ಲದೇ ಕಮಲ ಮತ್ತು ಕಮಲದಳಗಳು ಪ್ರಮುಖಪಾತ್ರ ವಹಿಸುತ್ತವೆ. ಮೂಲಾಧಾರದಿಂದ ಸಹಸ್ರ ಚಕ್ರಗಳವರೆಗಿನ ಎಲ್ಲಾ ಚಕ್ರಗಳಲ್ಲಿ ಕಮಲದ ದಳಗಳು ಪ್ರಧಾನವಾಗಿವೆ. ಇವುಗಳನ್ನು ನಿರ್ಧಿಷ್ಟ ಸಂಖ್ಯೆಯ ದಳಗಳಲ್ಲೇ ನಿಗದಿ ಪಡಿಸಲಾಗಿದೆ. ಮೂಲಾಧಾರ ಚಕ್ರವು ಮೊದಲನೇ ಚಕ್ರವಾಗಿದ್ದು ಇದರಲ್ಲಿ ನಾಲ್ಕು ದಳಗಳಿವೆ. ಸ್ವಾಧಿಷ್ಟಾನ ಇದು ಲಿಂಗ ಮೂಲದಲ್ಲಿರುವ ಆರುದಳ ಪದ್ಮ ಮಣಿಪೂರ ಇದು ನಾಭಿಮೂಲದಲ್ಲಿರುವ ಹತ್ತು ದಳ ಪದ್ಮ ಇದು ಹೃದಯ ಪ್ರದೇಶದಲ್ಲಿರುವ ಹನ್ನೆರಡು ದಳ ಪದ್ಮ ವಿಶುದ್ಧ-ಇದು ಕಾವಿ ಮೂಲದಲ್ಲಿರುವ ಹದಿನಾರು ದಳ ಪದ್ಮ ಆಜ್ಞಾ-ಇದು ಹುಬ್ಬುಗಳ ಮಧ್ಯದಲ್ಲಿರುವ ಎರಡು ದಳ ದಪ್ಪ ಮತ್ತು ಕೊನೆಯದಾಗಿ ಸಹಸ್ರಾರ ಚಕ್ರ ಇದು ನೆತ್ತಿ ಭಾಗದಲ್ಲಿದ್ದು ಸಾವಿರ ದಳಗಳ ಪದ್ಮವೆಂಬುದು ತಂತ್ರದಲ್ಲಿ ಬರುವ ವಿವರಣೆಯಾಗಿದೆ.

ಈ ಹಿನ್ನೆಲೆಯಲ್ಲಿ ನಾವು ಲಜ್ಜಾಗೌರಿಯನ್ನು ಗಮನಿಸಿದಾಗ ಕುಂಡಲಿನೀ ಶಕ್ತಿಯ ಹಿನ್ನೆಲೆಯಲ್ಲಿ ಲಜ್ಜಾಗೌರಿಯ ಶಿಲ್ಪಗಳಲ್ಲಿ ಈ ಮೇಲೆ ಕಾಣಿಸಿದ ತ್ರಿಕೋನವೃತ್ತ ಮತ್ತು ಕಮಲಗಳು ವಿಶೇಷವಾಗಿದೆ. ಯೋನಿ ಭಾಗವನ್ನು ಸಂಪೂರ್ಣವಾಗಿ ತೆರೆದಿಟ್ಟಂತೆ ಅಂದರೆ ಸ್ಪಷ್ಟವಾದ ಒಂದು ತ್ರಿಕೋನ ಎದೆ ಭಾಗದಲ್ಲಿ ಸ್ತನವನ್ನು ವಿವರವಾಗಿ ಕೆತ್ತಿರುವುದು ವೃತ್ತಾಕಾರದಲ್ಲಿರುತ್ತದೆ ಮತ್ತು ತಲೆಯ ಭಾಗ ಶಿರ ಚಕ್ರ-ವು ಸಹಸ್ರದಳ ಕಮಲವು ಅರಳಿರುವ ರೀತಿಯಲ್ಲಿ ಕೆತ್ತಲ್ಪಟ್ಟಿರುತ್ತದೆ. ಇವುಗಳನ್ನು ಗಮನಿಸಿದರೆ ಲಜ್ಜಾಗೌರಿ ಶಿಲ್ಪವು ತಾಂತ್ರಿಕ ಹಿನ್ನೆಲೆಯನ್ನು ಹೊಂದಿದೆ ಎಂಬುದು ನಿಸ್ಸಂಶಂಯುವಾಗುತ್ತದೆ. ಮೇಲೆ ಹೇಳಿದ ವಿಚಾರಗಳು ಇನ್ನಷ್ಟು ಸ್ಪಷ್ಟವಾಗಲು ಶ್ರೀಶಂಕರಾಚಾರ್ಯರರಿಂದ ರಚಿತವಾಗಿರುವ ಸೌಂದರ್ಯ ಲಹರೀ ಗ್ರಂಥವು ಬಹಳಷ್ಟು ಸಹಾಯಕವಾಗುತ್ತದೆ.

ಶ್ರೀ ಶಂಕರಾಚಾರ್ಯರರ ಸೌಂದರ್ಯ ಲಹರೀ ಗ್ರಂಥಕ್ಕೆ ಟೀಕೆಯನ್ನು ಬರೆದಿರುವ ಶ್ರೀ ಜಕ್ಕಣಾಮಾತ್ಯರ ಗ್ರಂಥದಲ್ಲಿ ಈ ಆಚಾರದ ಕುರಿತಂತೆ ಬಹಳಷ್ಟು ವಿವರಗಳು ಸಿಗುತ್ತವೆ. "ಶ್ರೀ ವಿದ್ಯಾವಿಷಯದಲ್ಲಿ ಸಮಯ ಮತ ಕೌಲಮತ ಎಂದು ಎರಡು ಬೇಧಗಳುಂಟು. ಪರ್ಯವಸಾನದಲ್ಲಿ ಇವೆರಡೂ ಒಂದೇ ಆದರೂ ಇತರ ವಿಷಯಗಳಲ್ಲಿ ಪರಸ್ಪರ ವಿರುದ್ದವಾದವು ಪರಮ ಶಿವ (ಕಾಮೇಶ್ವರ) ಪಾರ್ವತಿ (ಕಾಮೇಶ್ವರಿ) ಇವರನ್ನು ಸಮಭಾವನೆಯಿಂದ ಪೂಜಿಸುವುದು ಸಮಯ ಮತ. ಈ ಮತದಲ್ಲಿ ಚಕ್ರ ಪೂಜೆಯು ಮುಖ್ಯ ವಿಷಯ (ಆಕಾಶ) ಅಂತರ ಬಾಹ್ಯವೆಂದು ಎರಡು ಅಂತರವಾದದ್ದು ಹೃದಯಾಕಾರ ಉತ್ತಮಾಧಿಕಾರಿಗಳು

ಹೃದಯಾಕಾರದಲ್ಲಿ ಶ್ರೀದೇವಿಯನ್ನು ಮಾನಸಿಕವಾದ ಧ್ಯಾದಾರಿಗಳಿಂದ ಪೂಜಿಸುವರು. ಇವರಿಗೆ ಬಾಹ್ಯಗಳಾದ ಜಲಪುಷ್ಪ ಮುಂತಾದ ಸಾಮುಗ್ರಿಗಳು ಬೇಕಾಗಿಲ್ಲ.... ಸಮಯಗಳಿಗೆ ಮೂಲಾಧಾರ ಸ್ವಾಧಿಷ್ಟಾನ ಚಕ್ರಗಳಲ್ಲಿ ಪೂಜೆಯಿಲ್ಲ....

ಆಧಾರ ಚಕ್ರ ಪೂಜೆ ಮಾಡುವವರು ಕೌಲರು ಇವರ ಪೂಜೆಗೆ ಎಲ್ಲ ಸಾಮುಗ್ರಿಗಳ (ಮಧ್ಯ, ಮಾಂಸಾದಿ) ಬೇಕು. ಈ ಕ್ರಮವನ್ನು ವೇದಾಧಿಕಾರವಿಲ್ಲದವರು ಅನುಸರಿಸುವರು ಇದರಲ್ಲಿ ದಕ್ಷಿಣಕೌಲ, ಉತ್ತರಕೌಲ ಎಂಬ ಎರಡು ಪ್ರಬೇದಗಳು ಉತ್ತರ ಕೌಲದಲ್ಲಿ ಶಮಣರೆಂಬ ಒಂದು ಬೇಧವಿದೆ. ಈ ಮತಗಳಲ್ಲಿ ಪ್ರಧಾನವಾಗಿ ಶಕ್ತಿಗೆ ಪೂಜೆಯೇ ಹೊರತು ಪರಶಿವನಿಗಿಲ್ಲ. ಇವರೆಲ್ಲರಿಗೂ ಪೂಜಾಕ್ರಮಗಳು ಒಂದೇ ಆದರೂ ಶ್ರೀ ಚಕ್ರ ವಿಷಯದಲ್ಲಿ ವ್ಯತ್ಯಾಸವುಂಟು.....

ಮೂಲಾಧಾರದ ಆರು ಚಕ್ರಗಳಲ್ಲಿ ಶಿವಶಕ್ತ್ಯಾತ್ಮಕವಾದ ಶ್ರೀ ಚಕ್ರಕ್ಕೇ ಅಂತರ್ಭಾವ ಮೂಲಾಧಾರದಲ್ಲಿ ತ್ರಿಕೋನಕ್ಕೂ, ಸ್ವಾದಿಷ್ಟಾನದಲ್ಲಿ–ಅಷ್ಟಕೋಣಕ್ಕೂ, ಮಣಿಪುರದಲ್ಲಿ ಅಂತರ್ದಶಾರಕ್ಕೂ ಅನಾಹತದಲ್ಲಿ–ಬಹಿರ್ದಶಾರಕ್ಕೂ–ವಿಶುದ್ಧಾಂಯಲ್ಲಿ, ಚತುರ್ದಶಾರಕ್ಕೂ ಆಜ್ಞೆಯಲ್ಲಿ ಶಿವಚಕ್ರಗಳಾದ ಅಷ್ಟದಳ ಪದ್ಮ ಪೋಶದಳ ಪದ್ಮ ವೃತ್ತತ್ರಯ, ಭೂಪುರತ್ರಯೆ ಈ ನಾಲ್ಕು ಚಕ್ರಗಳಿಗೂ ಅಂತರ್ಭಾವ.[೮] ಇದರಿಂದ ನಾವು ಒಂದು ವಿಚಾರವನ್ನು ಗಮನಿಸಬಹುದು ಏನೆಂದರೆ ಶಕ್ತಿಯನ್ನು ನಾವು ಈಗಿರುವಂತೆ, ಸುಂದರವಾದ ಸಮಸ್ತ ಆಭರಣ ವಸ್ತ್ರ ಇತ್ಯಾದಿ ಅಲಂಕಾರಗಳಿರುವ ದೇವಿಯೆಂದು ಹಿಂದಿನವರು ಪೂಜಿಸುತ್ತಿರಲಿಲ್ಲ.

ಬದಲಾಗಿ ಶಕ್ತಿ ಎಂಬುದು ಸ್ತ್ರೀ ಪ್ರತಿನಿಧಿತ್ವವನ್ನು ಶಕ್ತಿಯನ್ನು ಗುರುತಿಸುವಿಕೆ ಇದಕ್ಕಾಗಿ ತ್ರಿಕೋನ, ಷಟ್ಕೋನದಂತಹ ಚಿನ್ಹೆಗಳು (ಚಕ್ರಗಳು) ಮತ್ತು ಇತರ ಪ್ರಾತಿನಿಧಿಕವಾದಂತಹ ರೂಪಗಳನ್ನುಬಳಸುವ ಮೂಲಕ ಗುರುತಿಸುತ್ತಿದ್ದರು. ಅಂದರೆ ಯಾವುದು ಸ್ತ್ರಿ ಆಕಾರವನ್ನು ಹೊಂದಿದೆಯೋ ಸೃಜನಾ ಕ್ರಿಯೆಯನ್ನು ನಡೆಸುತ್ತದೆಯೋ ಸೃಷ್ಟಿ ಮತ್ತು ಪಾಲನೆಗೆ ಕಾರಣವಾಗಿಯೇ ಅದು ಶಕ್ತಿ ಅಷ್ಟೇ. ಕಾಮೇಶ್ವರಿ, ಕಾಳಿ, ಇತ್ಯಾದಿ ಹೆಸರುಗಳಿಂದ ಗುರುತಿಸಲ್ಪಡುವಂತಹ ಸ್ತ್ರೀಗೆ ತಂತ್ರಮಾರ್ಗದಲ್ಲಿ (ವಿಶೇಷವಾಗಿ, ಕೌಲಮಾರ್ಗದಲ್ಲಿ) ವಿಶೇಷ ಮಹತ್ವ. ಇಲ್ಲಿ ಆಕೆ ಭೈರವಿಯೂ ಹೌದು ದುರ್ಗೆಯೂ ಹೌದು. ತಂತ್ರಾಚರಣೆಯಲ್ಲಿ ಸಿದ್ದಿಯ ಸಲುವಾಗಿ ನಡೆಸುವ ಕಾರ್ಯಕ್ಕೆ ತಾಂತ್ರಿಕರು ಬಳಸುತ್ತಿದ್ದುದು ಸಾಮಾನ್ಯವಾಗಿ ಕೆಳವರ್ಗದ

---

೦೮. ಸು.ನಾರಾಯಣ ಸ್ವಾಮಿ ಶಾಸ್ತ್ರೀ: ಪೀಠಿಕೆ ಶ್ರೀ ಶಂಕರಾಚಾರ್ಯ ವಿರಚಿತ ಸೌಂದರ್ಯ ಲಹರಿ, ಪುಟ–XXI

ಸ್ತ್ರೀಯನ್ನೇ ಮತ್ತು ತಂತ್ರ ಮಾರ್ಗದಲ್ಲಿ ನಡೆಸುತ್ತಿದ್ದ ಸ್ತ್ರೀಯರೇ ಈ ಕ್ರಿಯೆಯಲ್ಲಿ ಪರಸ್ಪರ ಪೂರಕವಾಗಿರುತ್ತಿದ್ದರು. ಅಂದರೆ ಇಲ್ಲಿ ಶಕ್ತಿಯ ಪೂಜೆಗೆ ಮಡಿವಂತಿಕೆ. ಕುಲಿನತೆ ಇತ್ಯಾದಿಗಳ ಮುಖ್ಯವಾಗಿರಲಿಲ್ಲ. ಬದಲಾಗಿ ನಿಷ್ಠೆಯೇ ಹೆಚ್ಚು ಪ್ರಸ್ತುತವಾಗಿರುತ್ತಿತ್ತು ಇದರಿಂದ ಇನ್ನೊಂದು ಅಂಶವನ್ನು ಕೂಡಾ ಗಮನಿಸಿದಂತಾಗುತ್ತದೆ.

ತಂತ್ರ ಸಂಪ್ರದಾಯದಲ್ಲಿ ಹೆಣ್ಣು ಎಂಬುದು ಮಾತೃರೂಪಿಯಾಗಿರುವುದರಿಂದ ಎಲ್ಲಾ ಹೆಣ್ಣುಗಳು ಮತ್ತು ಸ್ತ್ರೀಯರು ಒಂದೇ ಎಲ್ಲರೂ ಸಮಾನರಾಗಿ ಬಿಡುತ್ತಾರೆ. ಅಂತಹ ಸಂದರ್ಭದಲ್ಲಿ ಹೆಣ್ಣನ್ನು ಮುಖ ಚಹರೆಯಿಂದ ಗುರುತಿಸದೇ ಇರಲು ಬಹುಶಃ ಹೆಣ್ಣನ್ನು ಪ್ರತಿನಿಧಿಕವಾಗಿಯಷ್ಟೇ ಗುರುತಿಸುವ ದೃಷ್ಟಿಯಿಂದ ಲಜ್ಜಾಗೌರಿ ಶಿಲ್ಪಗಳು (ಮುಖ ರಹಿತವಾಗಿ, ತಲೆಯ ಭಾಗದಲ್ಲಿ ಕಮಲದ ಹೂವನ್ನು ಹೊಂದಿದ್ದು ಯೋನಿ ಮತ್ತು ಸ್ತನಗಳಿಗೆ ಮಾತ್ರ ಪ್ರಾಮುಖ್ಯತೆಯನ್ನು ಕೊಟ್ಟಿರುವುದು) ರಚನೆಯಾಗಿರಬಹುದು. ರುಂಡರಹಿತವಾಗಿರುವುದು ಅಸಂಪೂರ್ಣವಾಗಿರುತ್ತದೆ. ಒಂದು ವಿಚಾರವಾದರೆ ಅರಳಿದ ಕಮಲವು ಮತ್ತೊಮ್ಮೆ ಸಂಪೂರ್ಣವಾದ ಸಮೃದ್ಧತೆಯನ್ನು ವ್ಯಕ್ತಪಡಿಸುವುದೂ ಆಗಿರಬಹುದಾದ ಸಾಧ್ಯತೆ ಇದೆ. ಈಗ ನಮಗೆ ದೊರೆತಿರುವ ಲಜ್ಜಾಗೌರಿ ಶಿಲ್ಪಗಳು ಸಿಕ್ಕಿರುವ ಜಾಗೆ ಅವುಗಳ ಭೌಗೋಳಿಕತೆ ಶಾಸ್ತ್ರಗಳಲ್ಲಿ ಹೇಳಿರುವಂತೆ ವಾಯು ಮಾರ್ಗದ ಆರಾಧನೆಯು ಜನಸಾಮಾನ್ಯರ ಚಲನೆ ಇಲ್ಲದಿರುವಲ್ಲಿ ನದಿ ತೀರ ಸ್ಮಶಾನ, ಊರಹೊರಗೆ ನಡೆಯ ಬೇಕೆಂಬ ಕಟ್ಟು ಪಾಡುಗಳಿವೆ. ಪ್ರತಿಯೊಂದು ಅಂಶವನ್ನು ವಿಚಾರ ಮಾಡಿದರೆ ಲಜ್ಜಾಗೌರಿಯು ತಾಂತ್ರಿಕ ಆರಾಧನೆಯ ಹಿನ್ನೆಲೆಯಲ್ಲಿ ರಚಿತವಾಗಿದೆ ಎಂಬುದು ಸ್ಪಷ್ಟವಾಗುತ್ತದೆ.

**ಲಜ್ಜಾಗೌರಿಯ ಹಿನ್ನೆಲೆ**

ಲಜ್ಜಾಗೌರಿ ಶಿಲ್ಪಗಳ ತಾಂತ್ರಿಕ ಆಚರಣೆಗಳ ಹಿನ್ನೆಲೆ ಒಂದೆಡೆಯಾದರೆ ಸಾಮಾನ್ಯ ಜನರಲ್ಲಿ ಇರುವ ನಂಬಿಕೆಗಳು ಕಥೆಗಳು ವಿಭಿನ್ನವಾಗಿವೆ, ಇವು ಸಾಮಾನ್ಯವಾಗಿ ಆಯಾ ಪ್ರದೇಶಕ್ಕೆ ಸಂಬಂಧಪಟ್ಟಂತೆ ಇರುತ್ತವೆ. ಕೆಲವೊಮ್ಮೆ ಇವು ಪೂರಕವಾಗಿದ್ದರೆ ಕೆಲವೊಮ್ಮೆ ಊಹಾತ್ಮಕವಾಗಿಯೂ ಇರುತ್ತವೆ. ಈ ಕಥೆಗಳಿಗೆ ನಂಬಿಕೆಗಳೇ ಪೂರಕವಾಗಿದ್ದರೆ. ಐತಿಹಾಸಿಕ ಆಧಾರಗಳು ಕಡಿಮೆ ಆದರೂ ಇವು ಗಣ್ಯವಾಗಿರುವುದಿಲ್ಲ. ಇಂತಹ ಒಂದು ಕಥೆ ಮಹಾಕೂಟದ ಲಜ್ಜಾಗೌರಿ ಶಿಲ್ಪದ ಸುತ್ತ ಹಬ್ಬಿದೆ. ಮಹಾಕೂಟ ಮತ್ತು ಸಮೀಪದ ಪ್ರಸಿದ್ಧ ಕ್ಷೇತ್ರವಾಗಿರುವ ಬನಶಂಕರಿಯನ್ನು ಅಲ್ಲಿಯ ಐತಿಹಾಸಿಕ ಮಹತ್ವ ಭೌಗೋಳಿಕ ಹಿನ್ನೆಲೆಯಲ್ಲಿ ನೋಡಿದಾಗ ಕೆಲವೊಂದು ಸೌಮ್ಯತೆ ಇತ್ತು ಎಂಬುದು ಕಂಡು ಬರುತ್ತದೆ. ಬನಶಂಕರಿಯ ಕ್ಷೇತ್ರ, ಶಾಖಂಭರಿಯ

ಅಥವಾ ಗೌರಿಯ ರೂಪದಲ್ಲಿ ಪೂಜಿಸಲ್ಪಡುವ ಭೂದೇವಿಯ ಸ್ಥಳವಾಗಿದೆ. ಅಲ್ಲಿ ಎಲ್ಲಮ್ಮನ ದೇವಾಲಯವಿದ್ದು ಹಿಂದೊಮ್ಮೆ ಪ್ರಸಿದ್ಧ ಶಕ್ತಿಪೀಠವಾಗಿದ್ದ ಕುರುಹುಗಳನ್ನು ಹೊಂದಿದೆ. ಶಕ್ತಿಯು ಶಿವೆಯ ರೂಪದಲ್ಲಿ ರಾರಾಜಿಸುತ್ತ ಇದ್ದು ನಂತರ ಶಿವನೊಂದಿಗೆ ಪೂಜಿಸಲ್ಪಡಲಾರಂಭಿಸಿದ ವಿಚಾರ, ಮತ್ಸ್ಯಪುರಾಣ, ದೇವಿ ಭಾಗವತ್ ಹಾಗೂ ಶಾಖಂಭರಿ ಮಹಾತ್ಮೆಗಳಿಂದ ತಿಳಿದುಬರುತ್ತದೆ. ಶಾಖಾಂಭರಿ ಹೆಸರೇ (ಶಾಕ=ಹಸಿರು ವನಸ್ಪತಿ, ಫಲಾದಿ ಭರಿ=ಸಮೃದ್ಧಿ ಉಳ್ಳವಳು) ಭೂಮಿಯನ್ನು ಸೂಚಿಸುತ್ತದೆ. ಅನಾದಿಕಾಲದಿಂದ ನಡೆದುಬಂದ ಭೂಮಾತೆಯ ಪೂಜೆಯ ಪವಿತ್ರ ಸ್ಥಳ ಇದಾಗಿದ್ದರು, ಸ್ವಲ್ಪ ದೂರದಲ್ಲಿ ಮಹಾಕೂಟವು ಪುರಾಣ ಕಾಲದಲ್ಲಿ ಮಕುಟೇಶ್ವರಿಯ ಹೆಸರಿನಲ್ಲಿ ಹೆಚ್ಚು ಪ್ರಸಿದ್ಧವಿತ್ತು. ಮಹಾಕೂಟಕ್ಕೆ 'ಕೊಟವಿ' ಶಬ್ದಕ್ಕೂ ಸಂಬಂಧವಿದೆ. 'ಕೊಟವಿ' ಎಂದರೆ ದುರ್ಗೆಯ ಇನ್ನೊಂದು ಹೆಸರು. 'ನಗ್ನಸ್ತ್ರೀ' ಎಂದೂ ಮತ್ತೊಂದು ಅರ್ಥವಿದೆ. ಭಾರತದ ಪ್ರಸಿದ್ಧ ಶಕ್ತಿ ಪೀಠಗಳು, ಕ್ರಮೇಣ ಶೈವ ಪಂಥದ ಕೇಂದ್ರಗಳಾಗಿ ಪರಿಣಮಿಸಿದ ಕಾಲದಲ್ಲಿ ಈ ಮಹಾಕೊಟವಿಯ ಪೀಠ, ಮಕುಟ, 'ಮಹಾಕೂಟೇಶ್ವರ' ಆಗಿರಲು ಸಾಕು. ಅಲ್ಲಿದ್ದ ನಗ್ನ, ಶಿರೋಹಿನ ಸ್ತ್ರೀ ವಿಗ್ರಹ, ಕೊಟವಿಗೆ ಲಜ್ಜಾಗೌರಿಯೆಂಬ ಹೆಸರಿದೆ. ಈ ವಿಗ್ರಹವು ಹಿಂದೆ ಸುಸ್ಥಿತಿಯಲ್ಲಿ ಇತ್ತು ಎಂಬುದನ್ನು ಇಂತಹ ಸುಂದರ ವಿಗ್ರಹವನ್ನು (ಲಜ್ಜಾಗೌರಿ) ತನ್ನ ಭಾರತ ಯಾತ್ರೆಯಲ್ಲಿ ಬೇರೆಲ್ಲಿಯೂ ನೋಡಿದ್ದಿಲ್ಲ ವೆಂಬುದನ್ನು ಶ್ರೀ ಗಣೇಶ ಶಾಸ್ತ್ರಿ ಲೀಲೆ ಎಂಬುವರು ತಮ್ಮ ಮರಾಠಿ ಪ್ರವಾಸ ಕಥನದಲ್ಲಿ ಹೇಳಿದ್ದಾರೆ.....[೯]

ಇಂದು ಈ ವಿಗ್ರಹವು ಅಲ್ಲಿಯ ಕಲ್ಯಾಣಿಯ ದಂಡೆಯಲ್ಲಿ ಛಿದ್ರವಾಗಿ ಅನಾಥವಾಗಿ ಬಿದ್ದಿರುವುದನ್ನು ಕಾಣಬಹುದು. ಆದರೂ ಇಂದಿಗೂ ಈ ಶಿಲ್ಪ ತನ್ನ ಆಕರ್ಷಣೆಯನ್ನು ಕಳೆದುಕೊಂಡಿಲ್ಲ. ಈ ಶಿಲ್ಪದ ಕುರಿತಿರುವ ಅನೇಕ ಕಥೆಗಳಲ್ಲಿ ಈ ಒಂದು ಕಥೆಯು ಗಮನಾರ್ಹವಾಗಿದೆ.

ಶಿವ ಪಾರ್ವತಿಯರು ನಗ್ನ ಜಲಕ್ರೀಡೆಯಲ್ಲಿ ನಿರತರಾಗಿರುವಾಗ ಗಣನೊಬ್ಬನು ದರ್ಶನಕ್ಕೆ ಬರುತ್ತಾನೆ. ಶಿವನು ಓಡಿ ಹೋಗಿ ದೇವಾಲಯದ ಲಿಂಗದಲ್ಲಿ ಲೀನನಾಗುತ್ತಾನೆ. ಪಾರ್ವತಿಯು ಲಜ್ಜಿತಳಾಗಿ ನೀರಿನಲ್ಲಿ ಅಡಗಿಕೊಳ್ಳುತ್ತಾಳೆ. ಹೀಗೆ ನಾಚಿಕೊಂಡ ಪಾರ್ವತಿಯು ಲಜ್ಜಾಗೌರಿ ಎಂದೆನಿಸಿದಳು.[೧೦] ಇಂತಹದೇ ಇನ್ನೊಂದು ಕಥೆಯೂ ಈ ಶಿಲ್ಪದ ಬಗ್ಗೆ ಜನಪದರಲ್ಲಿ ಪ್ರಚಲಿತವಿದೆ. ಒಮ್ಮೆ ಶಿವನು ಪಾರ್ವತಿಗೆ ತನ್ನ ಕಂಬಳಿಯನ್ನು ಕೊಟ್ಟು ಲೋಕ ಸಂಚಾರಕ್ಕೆ

೦೯. ಡಾ. ಜ್ಯೋತ್ಸ್ನಾಕಾಮತ್ : ಮಹಿಳೆ ಒಂದು ಅಧ್ಯಯನ, ಪುಟ-೧೨-೧೩

೧೦. ಡಾ. ಶಿಲಾಕಾಂತ ಪತ್ತಾರ : ಬಾದಾಮಿ ಸಾಂಸ್ಕೃತಿಕ ಅಧ್ಯಯನ, ಪುಟ ೧೭೧

ಹೋಗುತ್ತಾನೆ. ಮತ್ತು ಅವನು ಇಲಿಯ ರೂಪ ತಳೆದು ಕಂಬಳಿಯುನ್ನು ತುಂಡರಿಸುತ್ತಾನೆ. ನಂತರ ಸಿಂಪಿಗನ ರೂಪದಲ್ಲಿ ಪಾರ್ವತಿಯು ಎದುರು ಕಾಣಿಸಿಕೊಳ್ಳುತ್ತಾನೆ. ಪಾರ್ವತಿಯು ಶಿವನ ಸಿಟ್ಟನ್ನು ನೆನದು ಭಯಭೀತಳಾಗಿ ಸಿಂಪಿಗನಲ್ಲಿ ಕಂಬಳಿಯುನ್ನು ಹೊಲಿದು ಕೊಡಲು ಕೇಳುತ್ತಾಳೆ. ಮೊದಲಿನಂತೆ ಅದನ್ನು ಹೊಲಿದು ಕೊಟ್ಟರೆ ಬೇಡಿದುದನ್ನು ಕೊಡುವುದಾಗಿ ಭಾಷೆ ಕೊಡುತ್ತಾಳೆ. ಸಿಂಪಿಗನ ರೂಪದ ಶಿವನು ಅದನ್ನು ಹೊಲಿದು ಕೊಟ್ಟು ಪಾರ್ವತಿಗೆ ರತಿ ಸುಖ ನೀಡಲು ಕೇಳುತ್ತಾನೆ. ಪಾರ್ವತಿಯು ಕೊಟ್ಟ ಮಾತಿಗೆ ತಪ್ಪಲಾಗದೆ ಒಪ್ಪುತ್ತಾಳೆ. ಸಂಭೋಗನಿರತ ಸಿಂಪಿಗನು ತನ್ನ ನಿಜರೂಪವನ್ನು ತೋರುತ್ತಾನೆ. ಆಗ ಪಾರ್ವತಿಯು ನಾಚಿಕೊಂಡಿದ್ದರಿಂದ ಲಜ್ಜಾಗೌರಿ ಎನಿಸುತ್ತಾಳೆ.[೧೧] ಇದೇ ವಿಚಾರವನ್ನು ಡಾ.ಜ್ಯೋತ್ಸ್ನಾ ಕಾಮತರವರು ಮಹಿಳೆ ಒಂದು ಅಧ್ಯಯನ ಎಂಬ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ.[೧೨]

ಈ ಎರಡು ಕಥೆಗಳು ಜಾನಪದ ನಂಬಿಕೆಗಳಾಗಿದ್ದು ಸಂಭೋಗದ ಕುರಿತೇ ವರ್ಣಿತವಾಗಿವೆ ಎಂಬುದನ್ನು ನಾವು ಗಮನಿಸಬಹುದಾಗಿದ್ದು ಎರಡೂ ಕಥೆಗಳಲ್ಲಿ ತಲೆಯು ಕಳೆದುಕೊಂಡು ದೇಹ ಮಾತ್ರ ಮುಖ್ಯವಾಗಿ ವರ್ಣಿತವಾಗಿದೆ ಎಂಬುದು ಮುಖ್ಯವಾಗುತ್ತದೆ. ಲಜ್ಜಾಗೌರಿ ಎಂದು ನಾವು ಕರೆಯುವ ಗುರುತಿಸುವ ಶಿಲ್ಪಗಳಿಗೂ ಒಂದೊಂದು ಕಡೆ ಬೇರೆ ಹೆಸರುಗಳಿಂದ ಗುರುತಿಸಲಾಗುತ್ತದೆ ಎಂದು ಹೇಳಲಾಗಿದೆಯಷ್ಟೇ ಅಂತಹವುಗಳಲ್ಲಿ ಕಮಲವ್ವ, ಎಲ್ಲಮ್ಮ, ಜೋಗುಳಾಂಬಾ (ಮಹಾರಾಷ್ಟ್ರ) ಇತ್ಯಾದಿಗಳಿಂದಲೂ ಗುರುತಿಸುತ್ತಾರೆ ಇವುಗಳಲ್ಲಿ ಆಂದ್ರ ಪ್ರದೇಶದ ಆಲಂಪುರ ಮುಖ್ಯವಾಗುತ್ತದೆ. ಈಕೆ (ಲಜ್ಜಾಗೌರಿ) ಯು ಇಲ್ಲಿ ಜೋಗುಳಾಂಬೆ, ಎಂದೇ ಪ್ರಸಿದ್ದಳಾಗಿದ್ದಾಳೆ. ಪಕ್ಕದಲ್ಲೇ ಇರುವ ಸಂಗಮೇಶ್ವರದಲ್ಲಿರುವ ದೇವಿಯನ್ನು "ಭೂದೇವಿ" ಎಂದು ಕರೆಯಲ್ಪಡುತ್ತಾರೆ.[೧೩]

'ಜೋಗುಳಾಂಬೆ' ಶಬ್ದ ಯೋಗ ಯೋಗಿನಿಯಿಂದ ಬಂದಿದೆ ಎಂಬ ನಂಬಿಕೆ ಇದ್ದರೂ, ಕನ್ನಡ ಶಬ್ದ ಜೋಗುಳದಿಂದ ಬಂದಿರುಹುದಾದ ಸಾಧ್ಯತೆ ಹೆಚ್ಚು! ಏಕೆಂದರೆ ಇಲ್ಲಿಯೂ ಮಕ್ಕಳಾಗದವರೇ ಹೆಚ್ಚಿನ ಸಂಖ್ಯೆಯಲ್ಲಿ ಈ ದೇವಿಯ, ಪೂಜೆ ಆರಾಧನೆಗಳನ್ನು ಕೈಗೊಳ್ಳುತ್ತಾರೆ. ಮನೆಯಲ್ಲಿ ಜೋಗುಳ ಆಡುವ (ತೊಟ್ಟಿಲು ಕಟ್ಟುವ) ಯೋಗವನ್ನು ಒದಗಿಸುವ ಅಂಬೆ (ತಾಯಿ) ಯೆಂಬ ದೃಢನಂಬಿಕೆ ಹೊಂದಿದವರಿಂದಾಗಿ ಆಲಂಪುರದ ದೇವಿಯೂ ಲಜ್ಜಾಗೌರಿ ರೂಪ ಹೊಂದಿದರೂ 'ಜೋಗುಳಾಂಬೆ' ಎಂದೇ ಪ್ರಸಿದ್ಧಳಾಗಿದ್ದಾಳೆ.

೧೧. ಡಾ. ಶಿಲಾಕಾಂತ ಪತ್ತಾರ : ಬಾದಾಮಿ ಸಾಂಸ್ಕೃತಿಕ ಅಧ್ಯಯನ, ಪುಟ ೧೭೧
೧೨. ಡಾ. ಜ್ಯೋತ್ಸ್ನಾಕಾಮತ್ : ಮಹಿಳೆ ಒಂದು ಅಧ್ಯಯನ, ಪುಟ-೧೩
೧೩. ಡಾ. ಜ್ಯೋತ್ಸ್ನಾಕಾಮತ್ : ಮಹಿಳೆ ಒಂದು ಅಧ್ಯಯನ, ಪುಟ-೧೬

ಆಲಂಪುರ, ಸಂಗಮೇಶ್ವರಗಳಲೆಲ್ಲ ಜೋಗುಳಾಂಬೆ, ಭೂದೇವಿಯರನ್ನು ರೇಣುಕೆ ಮತ್ತು ಎಲ್ಲಮ್ಮನ ಅವತಾರವೆಂದೇ ಜನ ಗುರುತಿಸುತ್ತಾರೆ. 'ಎಲ್ಲಮ್ಮ' ದಿಂದಲೆ ಆಲಂಪುರ ಬಂದಿದೆಯೆಂದು ವಿದ್ವಾಂಸರ ಮತವಾಗಿದೆ. 'ಎಲ್ಲ' ಶಬ್ದವು ಅಖಿಲ ಸೃಷ್ಟಿಯನ್ನು ಒಳಗೊಂಡು ಈಗ ಎಲ್ಲಮ್ಮನು ಸೃಷ್ಟಿಮಾತೆಯು ಅಥವಾ ಭೂದೇವಿಯು ಪ್ರತಿಮೆಯು ಸಂಕೇತದಲ್ಲಿ ಪೂಜೆಗೊಂಡರೂ. ಶಿರೋಹೀನ ದಡದ ರೂಪದಲ್ಲಿ ಅಥವಾ ಯೋನಿರೂಪದಲ್ಲಿ ತುಂಬ ಪ್ರಾಚೀನ ಯುಗದಲ್ಲಿ ಪೂಜಿಸಲ್ಪಡುತ್ತಿದ್ದ ಲಜ್ಜಾಗೌರಿಯು ಪ್ರತೀಕವೇ ಆಗಿದ್ದಾಳೆ ಎಂಬುದು ಪರಶುರಾಮ-ರೇಣುಕೆಯು ಕಥೆಯಿಂದ ಸ್ಪಷ್ಟವಾಗತ್ತದೆ. ರೇಣುಕೆ ಮತ್ತು ಎಲ್ಲಮ್ಮನ ಪೂಜಾಕೇಂದ್ರಗಳಿರುವಲ್ಲೆಲ್ಲ ಈ ಕಥೆ ಸ್ಥಳೀಯ ಬದಲಾವಣೆಗಳನ್ನು ಹೊಂದಿದರೂ, ನಗ್ನತೆ, ಶಿರೋಹೀನತೆ, ಕಮಲ ಸಂಕೇತಗಳು ಹಾಗೇ ಉಳಿದುಕೊಂಡು ಬಂದಿವೆಯಾದ್ದರಿಂದ ಕೆಲವು ನಿದರ್ಶನಗಳನ್ನು ನೋಡಬಹುದು.[೧೪]

ಆಲಂಪುರದ ಸ್ಥಳ ಪುರಾಣದಲ್ಲಿ ಜಮದಗ್ನಿ ಋಷಿಯು ಪತ್ನಿಯಾದ ರೇಣುಕೆಗೆ ಪ್ರಾಧಾನ್ಯವಿದೆ. ದಿನವೂ ಆಕೆ. ತುಂಗಭದ್ರಾ ನದಿಗೆ ಹೋಗಿ, ಸ್ವತ ಮರಳಿನಿಂದ ಕೊಡವನ್ನು ಮಾಡಿ ಹಾವಿನ ಸಿಂಬಿಯು ಮೇಲೆ ನದಿಯು ನೀರು ತುಂಬಿದ ಕೊಡವನ್ನು ಹೊತ್ತು ಪತಿಯು ಪೂಜಾದಿ ಅನುಷ್ಠಾನಕ್ಕೆ ತಂದುಕೊಡುವುದು ವಾಡಿಕೆಯಾಗಿತ್ತು. ಅವಳ ಪ್ರಾತಿವೃತೆ ಮಹಿಮೆಯಿಂದಾಗಿ ಹಸಿಮಣ್ಣಿನ ಕೊಡದಿಂದ ನೀರು ಸೋರುತ್ತಿರಲಿಲ್ಲ. ಒಂದು ದಿನ ನದಿಯಲ್ಲಿ ಸುಂದರ ರಾಜ ಪುರುಷನೊಬ್ಬನು ತನ್ನ ಸ್ತ್ರೀಯೊಂದಿಗೆ ಜಲಕ್ರೀಡೆಯಲ್ಲಿ ತೊಡಗಿದ್ದನ್ನು ಕಂಡ ರೇಣುಕೆಯು ಮನಸ್ಸು ಕ್ಷಣ ಮಾತ್ರ ವಿಚಲಿತವಾಗುತ್ತದೆ. ಆ ಬಳಿಕ ಆಕೆ ದಿನದಂತೆ ಹಸಿ ಮಣ್ಣಿನ ಕೊಡವನ್ನು ಮಾಡಲು ಯತ್ನಿಸಿದಾಗ ಸಾಧ್ಯವಾಗದೆ ನೀರಿಲ್ಲದೆಯೇ ಆಶ್ರಯಕ್ಕೆ ಹಿಂದಿರುಗುವಂತೆ ಆಗುತ್ತದೆ.

ತಪೋಬಲದಿಂದ ಪತ್ನಿಯು ದೌರ್ಬಲ್ಯವನ್ನು ಅರಿತ ಜಮದಗ್ನಿಯು ಕೋಪಾವಿಷ್ಟನಾಗಿ ಅವಳ ಶಿರಚ್ಛೇದನ ಮಾಡಲು ತನ್ನ ಒಬ್ಬೊಬ್ಬ ಮಗನನ್ನು ಕರೆದು ಆಜ್ಞಾಪಿಸುತ್ತಾನೆ. ಯಾರೂ ಒಪ್ಪದಾದಾಗ ಪರಶುರಾಮನೇ ಮುಂದಾಗಿ ತಾಯಿಯು ರುಂಡ ಹಾರಿಸುತ್ತಾನೆ. ಪ್ರಸನ್ನನಾದ ತಂದೆಯು ವರವನ್ನು ಬೇಡು ಎಂದಾಗ ತಾಯಿಗೆ ಜೀವದಾನ ಮಾಡುವಂತೆ ಪರಶುರಾಮ ಕೇಳಿಕೊಳ್ಳುತ್ತಾನೆ. ಆದರೆ ರುಂಡವು ಅದೆಲ್ಲೋ ದೂರಕ್ಕೆ ಹಾರಿಹೋಗಿ ಅಪವಿತ್ರ ಸ್ಥಾನದಲ್ಲಿ ಬಿದ್ದಿರುತ್ತದೆ. ಈ ಕಾರಣಕ್ಕಾಗಿ ತಾಯಿಯು ಮೊದಲಿನಂತಾಗಲು ಸಾಧ್ಯವಿಲ್ಲ ಆದರೆ ಅವಳು

೧೪. ಡಾ. ಜ್ಯೋತ್ಸ್ನಾಕಾಮತ್ : ಮಹಿಳೆ ಒಂದು ಅಧ್ಯಯನ, ಪುಟ-೧೬-೧೭

ಲೋಕ ವಂದ್ಯಳಾದ್ದರಿಂದ ಶಿರದ ಉಪಾಸನೆಯನ್ನು ಎಲ್ಲಮ್ಮನ ರೂಪದಲ್ಲಿಯೂ ಧಡದ ಪೂಜೆಯನ್ನು ಭೂದೇವಿಯ ರೂಪದಲ್ಲಿಯೂ ಕೈಗೊಂಡು ಜನರು ಅನುಗ್ರಹಕ್ಕೆ ಪಾತ್ರರಾಗುತ್ತಾರೆ ಎಂಬ ವರವನ್ನು ಜಮದಗ್ನಿಯು ಕೊಡಮಾಡುತ್ತಾನೆ.[೧೫] ಮೇಲೆ ಹೇಳಿದ ಕಥೆಯು ಲಜ್ಜಾಗೌರಿ ಶಿಲ್ಪದ ವಿಚಾರಧಲ್ಲಿ ಸ್ವಲ್ಪ ಮಟ್ಟಿನ ಹೊಂದಾಣಿಕೆ ಯಾಗುವುದನ್ನು ಗಮನಿಸಬಹುದು. ಇದೇ ನಿಜವಾಗಿದ್ದರೆ ಕರ್ನಾಟಕದ ಭಾಗಗಳಲ್ಲಿ ಕಂಡು ಬರುವ ಲಜ್ಜಾಗೌರಿ ಶಿಲ್ಪಗಳು ಎಲ್ಲಮ್ಮ ಮತ್ತು ಭೂದೇವಿಯ ವಿಗ್ರಹಗಳೇ ಆಗಿರಬೇಕಾಗುತ್ತದೆ ಮತ್ತು ಈ ಕಥೆಯು ಪೌರಾಣಿಕ ಮತ್ತು ಜಾನಪದಕ್ಕೆ ಸೇರಿದವಾಗಿರುವುದರಿಂದ ಈ ಶಿಲ್ಪಗಳು ಕೊಳ್ಳಗಳಲ್ಲಿ ಮತ್ತು ನಿರ್ಜನ ಪ್ರದೇಶಗಳಲ್ಲಿ ಇರುವುದರ ಬದಲಾಗಿ ಊರ ಸಮೀಪದಲ್ಲಿ ಇರಬೇಕಾಗಿತ್ತು ಆದರೆ, ಇದು ಹೀಗಿದ್ದಂತೆ ಕಂಡು ಬರುವುದಿಲ್ಲ ಆದುದರಿಂದ ಈ ಶಿಲ್ಪಗಳನ್ನು ತಾಂತ್ರಿಕ ಆರಾಧನೆಯಲ್ಲೇ ನಾವು ಕೇಂದ್ರಿಕರಿಸುವುದು ಉತ್ತಮವಾಗಿದೆ.

ಪ್ರತಿವ್ಯಕ್ತಿಯಲ್ಲಿಯೂ ಸ್ತ್ರೀ ಮತ್ತು ಪುರುಷ ಅಂಶಗಳೆರಡೂ ಇರುತ್ತವೆ ಎಂಬುದು ಪ್ರಾಚೀನ ಸಾಧಕರು ಕಂಡುಕೊಂಡಿರುವ ವಿಚಾರ ಇದು ಜಗತ್ತಿನ ಎಲ್ಲ ಜೀವರಾಶಿಗೂ ಒಂದೇ ಆಗಿದೆ. ಆದುದರಿಂದ ನಮ್ಮ ಒಳಗಿರುವ ಸ್ತ್ರೀ ತತ್ವವನ್ನೇ ಉದ್ದೇಶಿಸಿ ತೃಪ್ತಿ ಪಡಿಸುವುದು ಒಂದು ರೀತಿಯಾದರೆ ತಾಂತ್ರಿಕರು ಸ್ತ್ರೀತತ್ವವನ್ನು ದೇವತೆಯೆಂದು ಒಪ್ಪಿಕೊಂಡು ಬಾಹ್ಯ ಮತ್ತು ಆಂತರಿಕ-ಎರಡೂ ರೀತಿಯಿಂದ ಮಾತೃತ್ವವನ್ನು ತೃಪ್ತಿಪಡಿಸಿ ಆ ಮೂಲಕ ಆನಂದವನ್ನು ಅನುಭವಿಸುವುದು ಅವರ ಜೀವನ ಮತ್ತು ಆಚರಣಾ ಪದ್ಧತಿಯಾಗಿತ್ತು. ಆದುದರಿಂದ ಆದಿ ಮಾತೆಯನ್ನು ಹಲವಾರು ರೂಪಗಳಿಂದ ಪೂಜಿಸಿ ಲಲಿತ ಕಾಮೇಶ್ವರಿ, ಭುವನೇಶ್ವರಿ, ಚಿನ್ನಮಸ್ತಾ, ದುರ್ಗಾ, ಇತ್ಯಾದಿ ದೇವಿಯನ್ನು ಉದ್ದೀಪನಗೊಳಿಸಿ ಸಾಕ್ಷಾತ್ಕರಿಸಿಕೊಳ್ಳುತ್ತಿದ್ದುದು ಕಾಣಬಹುದು ಆದುದರಿಂದಲೇ ತಾಂತ್ರಿಕರ ಪೂಜಾಕ್ರಮದಲ್ಲಿ ಎಲ್ಲಾ ಸ್ತ್ರೀಯರು ಮಾತೃ ಸ್ವರೂಪರೇ ಆಗಿದ್ದರು ತಾಂತ್ರಿಕರ ಪೂಜಾಕ್ರಮದಲ್ಲಿ ಸ್ತ್ರೀಯರಿಗೆ ಪ್ರಾಧ್ಯಾನ್ಯವಿದ್ದು ಕೆಲವೊಮ್ಮೆ ಶಾಕ್ತಪಂಥದ ಯೋಗಿನಿಯರೇ ತಾಂತ್ರಿಕ ವಿಧಾನಗಳಲ್ಲಿ, ಮಂತ್ರಶಕ್ತಿಗಳಲ್ಲಿ ಮಿಗಿಲಾಗಿರುತ್ತಿದ್ದರು. ಹೆಣ್ಣಿನಲ್ಲಿ ದೈವಿಕತೆ ಕಂಡದ್ದು, ಜಾತಿಪಂಥ ಪದ್ದತಿಯನ್ನು ಮೀರಿನಿಂತದ್ದು ಹಾಗೂ ವರ್ಗ ಸಮಾನತೆಯನ್ನು ಸಾಧಿಸಿದ್ದು ತಾಂತ್ರಿಕ ತತ್ವದ ಉತ್ತಮಾಂಶಗಳು. ಆದರೆ ಅವರಲ್ಲಿ ಹಲವರು ಬಾಹ್ಯಾಚಾರಣೆಗಳಲ್ಲೇ ಮಗ್ನರಾಗಿ, ಪಂಚ 'ಮ' ಕಾರಗಳಿಗೆ ಮಹತ್ವ ನೀಡಿದ್ದು (ಮಾಂಸ, ಮತ್ಸ್ಯ, ಮುದ್ರೆ, ಮದ್ಯ, ಮೈಥುನಗಳು ಪವಿತ್ರ ರೂಪದಲ್ಲಿ ಸಾಧನೆಯ ಅಂಗಗಳಾಗಿವೆ). ಇತರ ವೈದಿಕ ಮತಾನುಯಾಯಿಗಳು ಅವರನ್ನು ವಾಮ ಪಂಥೀಯ (ವಾಮಮಾರ್ಗಿ)ರೆಂದು ಹೀಗಳೆಯಲು

---

೧೫. ಡಾ. ಜ್ಯೋತ್ಸ್ನಾಕಾಮತ್ : ಮಹಿಳೆ ಒಂದು ಅಧ್ಯಯನ, ಪುಟ-೧೭-೧೮

ಕಾರಣವಾಯಿತು.[೧೬] ತಾಂತ್ರಿಕ ಸಾಧಕರಲ್ಲಿ ಸ್ತ್ರಿಯರು ಸೇರಿದ್ದು ಹೆಚ್ಚಿನ ಸಾಧನೆ ಮಾಡಿದವರು ಬೈರವಿಗಳೆಂದು ಗುರುತಿಸಲ್ಪಡುತ್ತಿದ್ದರು. ಇಲ್ಲಿ ಇಂದಿಗೂ ನಗ್ನತೆ ಉಳಿದು ಬಂದಿದೆ. ಅಲ್ಲದೆ ಸಾಧನೆಯ ಸಂದರ್ಬದಲ್ಲಿ ಸ್ತನ ಮಂಡಲ ಪೂಜೆ ಭಗ್ನ ಪೂಜೆ, ಬೈರವಿ, ಆರಾಧನೆ, ಲಲಿತಾ ಪೂಜೆ ಇತ್ಯಾದಿಗಳು ನಡೆಯುತ್ತಿದ್ದುದು. ಸಾಮಾನ್ಯವಾಗಿದೆ ಬಹುಶ್ಯ ಇಂತಹ ಆಚರಣೆಯ ಒಂದು ಭಾಗವೇ ಈ ಲಜ್ಜಾಗೌರಿ ಶಿಲ್ಪದ ಆರಾಧನೆ ಲಜ್ಜಾಗೌರಿ ಶಿಲ್ಪಗಳ ರಚನೆಗೆ ಪ್ರೇರಣೆಯಾಗಿರಬೇಕು.

ಹಿಂಧೂ ಧರ್ಮವನ್ನು ಪುನಶ್ಚೇತನಗೊಳಿಸಿದ ಶಂಕರಾಚಾರ್ಯರು ತಂತ್ರದ ಪ್ರಭುತ್ವವನ್ನು ಹಾಗೂ ವ್ಯಾಪಕತೆಯನ್ನು ಮನಗಂಡಿದ್ದರು. ಅವರ ಸಾತ್ವಿಕ ರೂಪವನ್ನು ಅಳವಡಿಸಿಕೊಂಡರು, ಸ್ತ್ರೀ ತತ್ವ, ಸಕ್ತಿಯ ಸಂಕೇತವಾದ ಶ್ರೀ ಚಕ್ರವನ್ನು ಕಂಚಿಯಲ್ಲಿ ಸ್ಥಾಪಿಸಿದರು ಶಿವನು ಶಕ್ತಿಯೊಡನೆ ಸೇರಿಕೊಂಡಾಗಲೇ ಲೋಕ ಕಲ್ಯಾಣ ಸಾಧ್ಯವೆಂದು ಭೋಧಿಸಿದರು. ಶಿವನೂ ಸಹಿತ ಶಂಭು (ಶಿವ ಅಥವಾ ಶಕ್ತಿಯ ಜೊತೆಗಿನ ಶಂಭು ಮತ್ತು ಈಶ್ವರ) ಕಲ್ಪನೆಯೇ ಬಲಗೊಳ್ಳುತ್ತ ಕ್ರಮೇಣ ಲಜ್ಜಾಗೌರಿಯ ಶಿಲ್ಪವು ಸೇರಿದಂತೆ, ಶಕ್ತಿ ಪೀಠಗಳು ಶೈವ ಆರಾಧನಾ ಕೇಂದ್ರಗಳಾಗಿ ಬೆಳೆದವು. ಮೊದಲಿಗೆ ಮಳೆ, ಬೆಳೆ, ಸುಫಲತೆಗೆ ಸೃಷ್ಟಿಲಯಗಳಿಗೆ ಕಾರಣಳಾದ ಸೃಷ್ಟಿರೂಡಿ ಮಾತೆಯು ಘಣತೆ ಹೊಂದಿ, ಕೇವಲ ಸಂತಾನ ದೇವತೆಯ ರೂಪದಲ್ಲಿ ಮುಂದುವರಿದಳು.[೧೭] ಇಲ್ಲಿ ನಾವು ಇನ್ನೊಂದು ವಿಚಾರವನ್ನು ಗಮನಿಸಬಹುದು. ತಾಂತ್ರಿಕ ಆರಾಧನೆಯಲ್ಲಿ ಅದರಲ್ಲೂ ಸ್ತ್ರೀಯ ಆರಾಧನೆಗಳಲ್ಲಿ ಸಾಮಾನ್ಯವಾಗಿ ತಾಂತ್ರಿಕ ವೈದಿಕರಂತೆ ದೇವಾಲಯದ ಗುಡಿಯಲ್ಲಿರುವ ದೇವತಾ ಮೂರ್ತಿಯನ್ನು ಒಪ್ಪುವದಿಲ್ಲ. ಬದಲಾಗಿ ಸ್ತ್ರೀಯನ್ನೇ ಮಂಡಲ ಮಧ್ಯದಲ್ಲಿ ಕೂರಿಸಿ ಅರ್ಚಿಸುತ್ತಿದ್ದರು ಅಥವಾ ಮಂಡಲವನ್ನು ರಚಿಸಿ ಅದರ ಮಧ್ಯ ಶ್ರೀ ಚಕ್ರವನ್ನು ಬರೆದು ಅದನ್ನು ಪೂಜಿಸುತ್ತಿದ್ದರು.

ಇಲ್ಲಿ 'ಶ್ರೀ ಚಕ್ರ' ವೂ ಸ್ತ್ರಿಯ ಪ್ರಾತಿನಿಧಿಕವಾಗಿದೆ. ಮತ್ತು ದೇವರ ಪ್ರತಿರೂಪವಾಗಿದೆ. ಶ್ರೀ ಚಕ್ರವು ಈ ಹಿಂದೆಯೇ ಹೇಳಿದಂತೆ ಅದೋ ಮುಖ ತ್ರಿಕೋನವಾಗಿದ್ದು ಯೋನಿ (ಭಾಗ) ರೂಪವಾಗಿದೆ. ಇವೆರಡೂ ಅಲ್ಲದೆ ಇನ್ನೊಂದು ವಿಧಾನವೂ ಇದೆ. ಅದೆಂದರೆ ಪ್ರಸ್ತುತ ಉದ್ದೇಶಕ್ಕೆ ಸಂಬಂಧಿಸಿದಂತೆ ಮಂಡಲ ಪೂಜೆಯ ದಿನವೊಂದನ್ನು ನಿರ್ಧರಿಸಿ ಅದಕ್ಕೆ ಪೂರ್ವಸಿದ್ದತೆಗಳನ್ನು ಮಾಡಿಕೊಳ್ಳುತ್ತಿದ್ದರು ನಿರ್ಧರಿಸಿದ ದಿನಕ್ಕಿಂತ ಸಾಕಷ್ಟು ಪೂರ್ವದಲ್ಲಿಯೇ ಎಲ್ಲಾ ಸಿದ್ದತೆಗಳನ್ನು

೧೬. ಡಾ. ಜ್ಯೋತ್ಸ್ನಾಕಾಮತ್ : ಮಹಿಳೆ ಒಂದು ಅಧ್ಯಯನ, ಪುಟ-೨೦
೧೭. ಡಾ. ಜ್ಯೋತ್ಸ್ನಾಕಾಮತ್ : ಮಹಿಳೆ ಒಂದು ಅಧ್ಯಯನ, ಪುಟ-೨೦

ಮಾಡಿಕೊಳ್ಳುವುದು. ಅವುಗಳಲ್ಲಿ ಮೂರ್ತಿ ರಚನೆಯೂ ಒಂದಾಗಿದೆ. ಕಲ್ಲಿನಿಂದ, ಮರದಿಂದ, ಲೋಹದಿಂದ ಅಥವಾ ಮಣ್ಣಿನಿಂದ ಮೂರ್ತಿಯನ್ನು ರಚಿಸಿಕೊಳ್ಳುತ್ತಿದ್ದರು. ನಿರ್ಧರಿತ ದಿನಕ್ಕೆ ಆ ಮೂರ್ತಿಯನ್ನು ರಚಿಸಿ ಪೂಜಿಸಿ ನಂತರ ಅದನ್ನು ವಿಸರ್ಜನೆ ಮಾಡುತ್ತಿದ್ದರು. ಉದ್ದೇಶಿತ ಪೂಜೆಯ ನಂತರ ಉಳಿದ ಎಲ್ಲಾ ವಸ್ತುಗಳ ನಿರ್ಮೂಲ್ಯವೇ ಈ ರೀತಿಯ ಪೂಜೆಗಳು ಸಾಮಾನ್ಯವಾಗಿ ಘನಗೋರ ಕಾಡಿನಲ್ಲಿ ಮಾನವ ಸಂಚಾರವಿಲ್ಲದ ಪ್ರದೇಶಗಳಲ್ಲಿ ಸಾಮಾನ್ಯವಾಗಿ ಹುಣ್ಣಿಮೆ ದಿನಗಳಲ್ಲಿ ನಡೆಯುತ್ತಿದ್ದವು. ಇಂತಹದೇ ಆರಾಧನೆ ಸ್ಮಶಾನದಲ್ಲಿದ್ದ ಹೂತಿದ್ದ ಹೆಣವನ್ನು ಹೊರತೆಗೆದು ಅದನ್ನು ಪೂಜಿಸಿ ನಂತರ ವಿಸರ್ಜಿಸುವುದು (ಪುನಃ ಹೂಳುವುದು) ಕೂಡಾ ಇದೆ. ಇವೆಲ್ಲಾ ಕೆಲವೊಂದು ತಾಂತ್ರಿಕ ಸಾಧಕರ ವಿವಿಧ ಗುಂಪುಗಳಲ್ಲಿ ಆಚರಣೆಯಲ್ಲಿರುವ ಕ್ರಿಯೆಯಾಗಿದೆ.*

ಸಿದ್ದನಕೊಳ್ಳದಲ್ಲಿ ಬಂಡೆಯ ಮೇಲೆ ಕೆತ್ತಿರುವ ಶಿಲ್ಪ ಮಹಾಕೂಟದಲ್ಲಿ ಇಂದು ಅನಾಥವಾಗಿ ಬಿದ್ದಿರುವ ಶಿಲ್ಪಗಳನ್ನು ಈ ಉದ್ದೇಶಕ್ಕೆ ರಚಿಸಿರದಬಹುದು. ಅಲ್ಲಿ ಹಿಂದಿನಿಂದಲೂ ತಂತ್ರಸಾಧನೆಗಳು ನಡೆಯುತ್ತಿದ್ದುದು ತಾಂತ್ರಿಕ ಆಚರಣೆ ಕೇಂದ್ರ ಸ್ಥಾನವಾಗಿದ್ದುದು ಹುಲಿಗೆವ್ವನಕೊಳ್ಳವು ಪ್ರಸಿದ್ಧ ಸಾದುಗಳ ಕ್ಷೇತ್ರವಾಗಿರುವುದು. ಅಲ್ಲಿ ಎರಡು ಲಜ್ಜಾಗೌರಿ ಶಿಲ್ಪಗಳು ಇರುವುದು ಇಂತಹ ಮಾತೆಗೆ ಪುಷ್ಟಿಕೊಡುತ್ತದೆ. ಶ್ರೀ ಚಕ್ರವನ್ನು ಸ್ಥಾಪಿಸಿ ಪೂಜಿಸುವುದರ ಬದಲಾಗಿ ಈ ರೀತಿಯ ರೂಪಗಳನ್ನು ರಚಿಸಿ ಪೂಜಿಸಿರಬಹುದು ಮೇಲೆ ಹೇಳಿದ ಮಾತುಗಳು ತಾಂತ್ರಿಕ ಆಚರಣೆಯ ಕುರಿತವುಗಳಾಗಿವೆ.

ಕರ್ನಾಟಕದ ಬತ್ತಲೆಗೌರಿ (ಲಜ್ಜಾಗೌರಿ) ಬತ್ತಲೆ ಬೈರವ ವಿಗ್ರಹ ಪೂಜೆ ತುಂಬ ಪ್ರಾಚೀನವಾದುದೆಂದು ತೋರುತ್ತದೆ. ಇವುಗಳಲ್ಲಿಯೇ ಲಜ್ಜಾಗೌರಿ ವಿಗ್ರಹಗಳು ಉತ್ತರ ಕರ್ನಾಟಕದ ಬಾದಾಮಿ ಪರಿಸರದಲ್ಲಿ ಹೆಚ್ಚು ಸಿಗುತ್ತವೆ. ಆದುದರಿಂದ ಬಾದಾಮಿ ಪರಿಸರವು ಈ ಸಂಪ್ರದಾಯದ ಒಂದು ಮುಖ್ಯ ನೆಲೆ ಎನಿಸುತ್ತದೆ. ಬಾದಾಮಿ ಪ್ರಮುಖವಾಗಿ ಶೈವ ಪರಿಸರವಾಗಿರುವುದರಿಂದ ಶೈವ ಸಂಪ್ರದಾಯಕ್ಕೂ ಲಜ್ಜಾಗೌರಿಗೂ ತಾತ್ವಿಕ ಆಚರಣಾತ್ಮಕ ಸಂಬಂಧವಿರಲೇಬೇಕು.[೧೮] ಈ ವಿಚಾರದಲ್ಲಿ ಇನ್ನಷ್ಟು ಸಂಶೋಧನೆಗಳು ನಡೆದರೆ ಇನ್ನು ಹಲವಾರು ವಿಚಾರಗಳು ಬೆಳಕಿಗೆ ಬರಬಹುದು ಸದ್ಯದ ಮಟ್ಟಿಗೆ ಇಲ್ಲಿ ಹೆಚ್ಚಿನ ವಿಚಾರಗಳು

---

* ಸತ್ಯಕಾಮರ ಹಲವಾರು ಗ್ರಂಥಗಳಲ್ಲಿ ಮುಖ್ಯವಾಗಿ ತಂತ್ರಯೋನಿ. ಪಂಚ'ಮ'ಗಳ ನಡುವೆ ಸ್ವತಂತ್ರ ಇತ್ಯಾದಿ ಗ್ರಂಥಗಳಲ್ಲಿ ಈ ಕುರಿತಾದ ಹಲವಾರು ವಿಚಾರಗಳು ಚರ್ಚಿಸಲ್ಪಟ್ಟಿವೆ.

೧೮. ಪಿ. ಆರ್. ತಿಪ್ಪೆಸ್ವಾಮಿ(ಸಂ) : ಶಿಲ್ಪ ಕಲಾ ಪ್ರಪಂಚ, ಪುಟ-೩೬೦. ಡಾ. ಎಂ.ಎಂ. ಕಲಬುರ್ಗಿಯವರ ಲೇಖನ/ ಲಜ್ಜಾಗೌರಿ.

ಊಹಾತ್ಮಕವಾಗಿಯೇ ಉಳಿದು ಬಿಡುತ್ತವೆ.

ಸೂಳೆ ಕಟ್ಟಿಸಿರುವುದು (ಲಂಜಾ) ವಿನಾಪೋಟಿಯೆಂಬ ಸೂಳೇದಾನ ನೀಡಿದುದು ಬತ್ತಲೆ ಉರ್ಧ್ವರೇತೇಶ್ವರ, ಬತ್ತಲೆ ಭೈರವ-ಬತ್ತಲೆ, ಲಕುಳೇಶ್ವರ ಮೂರ್ತಿಗಳಿರುವುದು, ಪಾಣಿಬಟ್ಟಲುವಿಲ್ಲದೆ ಕೇವಲ ಪುರುಷ ಲಿಂಗವನ್ನು ಸಂಕೇತಿಸುವ ನೂರಾರು ಲಿಂಗಗಳು ಕಂಡಕಂಡಲ್ಲಿ ಸ್ಥಾಪಿತವಾಗಿರುವುದು, ಲಜ್ಜಾಗೌರಿ ಹೆಸರಿನ ಬತ್ತಲೆ ಸ್ತ್ರೀ ವಿಗ್ರಹವಿರುವುದು, ಮಿಲನದ್ಯೋತಕವಾದ ಅರ್ಧಗೌರಿಶ್ವರ(ಅರ್ಧನಾರೀಶ್ವರ) ವಿಗ್ರಹ ಪ್ರಧಾನವಾಗಿರುವುದು ಇತ್ಯಾದಿ 'ದಿಗಂಬರತ್ವ'ದ ಅಂಶಗಳೆಲ್ಲ ಈ ಪ್ರದೇಶದಲ್ಲಿ ಕೇಂದ್ರಿಕೃತವಾಗಿದ್ದು, ಇದು ಈ ಕ್ಷೇತ್ರದ ಹಿಂದಿರುವ ಯಾವುದೋ ಅಂಶವನ್ನು ಧ್ವನಿಸುತ್ತಿರಬೇಕು. ಇದಕ್ಕೆ ಈ ಕೆಳಗಿನಂತೆ ವಿವರಣೆ ಕೊಡಬಹುದು.

ಮೊದಮೊದಲು ಶಿವಸಂಕೇತವಾದ ಲಿಂಗ ಮತ್ತು ಶಕ್ತಿ ಸಂಕೇತವಾದ ಯೋನಿಗಳನ್ನು ಪ್ರತ್ಯೇಕವಾಗಿ ಕಂಡರಿಸಿ ಪೂಜಿಸುತ್ತಿದ್ದರೆಂದು ತೋರುತ್ತದೆ. ಇದಕ್ಕೆ ನಿದರ್ಶನವಾಗಿ ಮಜತಿಯಲ್ಲಿ ಪುರುಷ ಲಿಂಗಾಕಾರದ ಕಲ್ಲಿನ ವಿಗ್ರಹ ಲಭಿಸಿದೆ. ಮಹಾಕೂಟದ ಬಯಲು ಪ್ರದೇಶದಲ್ಲಿ ಪುರುಷ-ಲಿಂಗಾಕಾರದ ನೂರಾರು ಕಲ್ಲಿನ ವಿಗ್ರಹಗಳು ಕಂಡುಬರುತ್ತವೆ. ಈಗಲೂ ಪ್ರಾಚೀನ ದೇವಾಲಯುಗಳಲ್ಲಿ ಯೋನಿ ಸಂಕೇತವಾದ ಪಾಣಿ ಬಟ್ಟಲು ಇಲ್ಲದೆ ಕೇವಲ ಪುರುಷ ಲಿಂಗ ಸಂಕೇತವಾದ ಶಿವಲಿಂಗಗಳಿರುವುದನ್ನು ಮಹಾಕೂಟೇಶ್ವರ ಲಿಂಗವೂ ಇದೆ. ಮಾದರಿ ಯದೆಂಬುದನ್ನು ಗಮನಿಸಬೇಕು. (ಇವುಗಳನ್ನೇ ಸ್ವಯಂಭೂಲಿಂಗವೆಂದು ಕರೆಯುತ್ತಾರೆ.[೧೯] ಶಿಲೆಯಲ್ಲಿ ಇಂತಹ ಮೂರ್ತಿಗಳನ್ನು ಕೆತ್ತುವಿಕೆ, ಸ್ತ್ರೀಯರನ್ನು ಪೂಜಿಸುವಿಕೆ ಮಧ್ಯ, ಮಾಂಸ ಇತ್ಯಾದಿ ವಿಚಾರಗಳ ಕುರಿತು ಹಲವಾರು ಕಡೆ ಸಾಕಷ್ಟು ಪ್ರಸ್ತಾಪಿಸಲಾಗಿದೆ. ಅದರಲ್ಲೂ ಶೈವರು ಮತ್ತು ಶಾಕ್ತರ ನಡುವೆ ಸಾಕಷ್ಟು ಸಂಘರ್ಷಗಳು ನಡೆದ ಬಗ್ಗೆ ತಿಳಿದು ಬರುತ್ತದೆ.

ಹನ್ನೆರಡನೇ ಶತಮಾನದಲ್ಲಿ ನಡೆದ ವೈಚಾರಿಕ ಕ್ರಾಂತಿ ಮತ್ತು ಬಸವಣ್ಣನವರಿಂದ ಸ್ಥಾಪಿತವಾದ ವೀರಶೈವ ಪಂಥ ಮತ್ತು ತಾಂತ್ರಿಕ ಆಚಾರಗಳ ನಡುವೆ ವಿಪರೀತ ತಿಕ್ಕಾಟ ನಡೆದಿರುವುದು ಕಂಡು ಬರುತ್ತದೆ. ಇದಕ್ಕೆ ಉದಾಹರಣೆಯಾಗಿ ಸ್ತ್ರೀಯನ್ನು ಪ್ರತ್ಯೇಕವಾಗಿ ಕಂಡರಿಸಿ ಪೂಜಿಸುತ್ತಿದ್ದುದಕ್ಕೆ ಮತ್ತು ತಿಕ್ಕಾಟಗಳೂ ನಡೆಯುತ್ತಿದ್ದುದಕ್ಕೆ ಬ್ರಹ್ಮ ಶಿವನ ಒಂದು ಪದ್ಯವನ್ನು ನೋಡಬಹುದು.

---

೧೯. ಪಿ. ಆರ್. ತಿಪ್ಪೆಸ್ವಾಮಿ(ಸಂ) : ಶಿಲ್ಪ ಕಲಾ ಪ್ರಪಂಚ, ಪುಟ-೩೬೭. ಡಾ. ಎಂ.ಎಂ. ಕಲಬುರ್ಗಿಯವರ ಲೇಖನ/ ಲಜ್ಜಾಗೌರಿ.

ಬಡವೆಯು ನಾಣಂ ಕಂಡ !
ರ್ಕಡೆಗಣಿಸುವರೆಂದಡ ಹಿತಮುಳ್ಳರಕಲ್ಲೊ !
ಳ್ಪಡೆದರ್ಚಿಪರೇನುಚಿತಮೆ !
ಮೃಡಾಣಿಯು ಕರಮೆ ನಾಣಪುತಿನ ರೂಪಂ !!

ಕಲ್ಲಿನಲ್ಲಿ ಕಡೆದ ಯೋನಿ(=ನಾಣ) ಯನ್ನು ಮತ್ತು ಹುತ್ತನ್ನು 'ಮೃಡಾಣಿ' ಎಂಬ ಭಾವನೆಯಿಂದ ಪೂಜಿಸುವ ಆಚರಣೆಯ ಅವಹೇಳನೆ ಇಲ್ಲಿದೆ. ಬಹುಶಃ ಹುಡುಕಿದರೆ ಪ್ರಾಚೀನ ಕಾಲದಲ್ಲಿ ಪೂಜೆಗೊಳ್ಳುತ್ತಿದ್ದ ಇಂಥ ಯೋನಿಶಿಲ್ಪಗಳು ಅಲ್ಲಲ್ಲಿ ಸಿಗಬಹುದು, ಸಿಂದಗಿಯ ಸಂಗಮೇಶ್ವರ ದೇವಾಲಯದ ಆವರಣದಲ್ಲಿ ಯೋನಿಯನ್ನು ಪ್ರಧಾನವಾಗಿ ಬಿಡಿಸಿದ ಸ್ತ್ರೀ ವಿಗ್ರಹವಿದೆ. ಕೆಲವು ದೇವಾಲಯಗಳಲ್ಲಿ ಈಗಲೂ ಸ್ತ್ರೀ ದೇವತೆಯ ಹೆಸರಿನಲ್ಲಿ ಹುತ್ತನ್ನು ಪೂಜಿಸುತ್ತಾರೆಂಬುದು ಲಕ್ಷಿಸಬೇಕಾದ ಸಂಗತಿ.[೨೦] ಮೇಲೆ ಉಲ್ಲೇಖಿಸಿರುವ ಮಾತಿನಂತೆ ವರ್ಣಿಸಿರುವ ಕಲ್ಲಿನಲ್ಲಿ ಕಡೆದಿರುವ ಯೋನಿಯ ಶಿಲ್ಪ ಎಂದರೆ ಲಜ್ಜಾಗೌರಿ ಎಂಬುದನ್ನು ಒಪ್ಪಲೇ ಬೇಕಾಗುತ್ತದೆ. ಇಲ್ಲಿ ಪಂಥಗಳ ನಡುವಿನ ಭಿನ್ನಾಭಿಪ್ರಾಯವೇನೆ ಇರಲಿ ಶಿಲ್ಪಗಳ ಹಿನ್ನಲೆಯಲ್ಲಿ ಗಮನಿಸಿದಾಗ ಇಂಥ ವಿಚಾರಗಳು ಮಹತ್ವದ್ದಾಗಿರುತ್ತದೆ. ಬಹುಶಃ ಬಸವಣ್ಣನವರ ಶಾಂತಿ ಮತ್ತು ಅಹಿಂಸೆ ಹಾಗೂ ವೈಚಾರಿಕತೆ ಮತ್ತು ತಾಂತ್ರಿಕರ ಹಿಂಸೆ, ಇತ್ಯಾದಿಗಳಿಂದ ಕೂಡಿದ ಆಚರಣೆಗಳ ನಡುವೆ ಸಂಘರ್ಷ ಇದ್ದರೆ ಆಶ್ಚರ್ಯವೇನಲ್ಲ ಆಗಿನ ಕಾಲದಲ್ಲಿಯೇ ವೈಚಾರಿಕ ಕ್ರಾಂತಿ ಬೆಳೆದು ಬಂದುದು ಬಹುಶಃ ಮುಂದಿನ ದಿನಗಳಲ್ಲಿ ಈ ರೀತಿಯ ಲಜ್ಜಾಗೌರಿ ಶಿಲ್ಪಗಳು ಮುಂದೆ ನಮಗೆ ದೊರೆಯುದಿರುವುದಕ್ಕೆ ಮತ್ತು ತಾಂತ್ರಿಕ ಆಚರಣೆಗಳು ಕಡಿಮೆಯಾಗಿರಲು ಕಾರಣವಾಗಿರಲೂಬಹುದು.

ಕರ್ನಾಟಕದ ಉತ್ತರ ಭಾಗದಲ್ಲಿ ಕೌಳರು, ಕಾಳಾಮುಕರು, ನಾಥ, ಸಿದ್ದ, ಬೈರವ ಮತ್ತು ನಾಗ ಪಂಥದ ಸಾಧಕರು ಹೆಚ್ಚಾಗಿ ಪ್ರಚಲಿತರಾಗಿದ್ದರು. ಉತ್ತರ ಕರ್ನಾಟಕದ ಭಾಗಗಳಲ್ಲಿ ಕೌಲರು ಸಾಕಷ್ಟು ಓಡಾಡಿದ ಗುರುತುಗಳಿವೆ. ಅದಕ್ಕೆ ಪುರಾವೆಯಾಗಿ ಕೌಲೂರು, ಕೌಲಗಿ, ಕೌಲಗುಡ್ಡ ಇತ್ಯಾದಿ ಹೆಸರುಗಳನ್ನು ಗಮನಿಸಬಹುದು. ಕೌಲರು ಅಂದರೆ ಶಾಕ್ತರು ಕಾಳಿಯನ್ನು ಶಕ್ತಿಯನ್ನು ಆರಾಧಿಸುವ ವಾಮಮಾರ್ಗಿಗಳು, ಅದೇ ರೀತಿ ಕಾಪಾಲಿಕ, ಗಾಣಪತ್ಯ, ಇತ್ಯಾದಿ ಪಂಥಗಳಿವೆ. ಕಾಳಾಮುಖ ಎಂದರೆ ಶಿವನನ್ನು ನಂಬುವ ಪಂಥ ಇವರಿಗೆ ಲಕುಲೀಶ, ಪಶುಪತಿ

---

೨೦. ಪಿ. ಆರ್. ತಿಪ್ಪೆಸ್ವಾಮಿ(ಸಂ) : ಶಿಲ್ಪ ಕಲಾ ಪ್ರಪಂಚ, ಪುಟ-೩೬೩. ಡಾ. ಎಂ.ಎಂ. ಕಲಬುರ್ಗಿಯವರ ಲೇಖನ/ ಲಜ್ಜಾಗೌರಿ.

ಎಂದು ಕರೆಯುಲ್ಪಡುವ ಶಿವನೇ ಅಧಿದೇವತೆ ಕರ್ನಾಟಕದ ಉದ್ದಗಲಕ್ಕೂ ಕೌಲರ ಗುರುತುಗಳಿದ್ದರೂ ಬಾದಾಮಿ ಪ್ರದೇಶದಲ್ಲಿ ಇವರ ಬಗ್ಗೆ ಹೆಚ್ಚು ಮಾಹಿತಿ ಸಿಗುತ್ತದೆ. ಇವರು ಶಕ್ತಿ ಆರಾಧಕರಾಗಿದ್ದುದರಿಂದ ನಗ್ನ ಸ್ತ್ರೀ ಆರಾಧನೆ ನಗ್ನ ಶಿಲ್ಪಗಳ ಪೂಜೆ ಪ್ರಮುಖವಾಗಿರುತ್ತದೆ. ಆ ಹಿನ್ನೆಲೆಯುಲ್ಲಿ ಈ ಶಿಲ್ಪಗಳ ರಚನೆಯಾಗಿರಬಹುದು. ಯೋನಿ ಪೂಜೆ ಇಲ್ಲಿ ಸಾಮಾನ್ಯ ಇದು ದೇವಿಯ ಭಾಗವೆಂದು ಪವಿತ್ರವೆಂದೂ ಆದುದರಿಂದ ಆಕೆ ಭಗವತಿಯೆಂದು ಪೂಜಿಸುವಿಕೆ ಪ್ರಾಮುಖ್ಯತೆ ಪಡೆದಿತ್ತು ಇದಕ್ಕೆ ಪೂರಕವಾಗಿ ಭಗವತಿಯನ್ನು ತೃಪ್ತಿ ಪಡಿಸಲು ಆ ಮೂಲಕ ದೇವಿಯನ್ನು ಸಂಪ್ರೀತಿ ಪಡಿಸಲು ವಿವಿಧ ಲೈಂಗಿಕ ಆಸನಗಳನ್ನು ಸಂಭೊಗ ಸಮಯದಲ್ಲಿ ಬಳಸುತ್ತಿದ್ದರೆಂದೂ ನಮಗೆ ವಿವಿಧ ಅಧ್ಯಯನಗಳಿಂದ ತಿಳಿಯುತ್ತದೆ.

ಇದೇ ಹಿನ್ನೆಲೆಯುಲ್ಲಿ ಲಜ್ಜಾಗೌರಿ ಶಿಲ್ಪವನ್ನು "ಭಗ"ವತಿ ಎಂದು ಕರೆದಿರಬಹುದಾದ ಸಾಧ್ಯತೆಯೂ ಇದೆ. ಆದುದರಿಂದ ಭಗವನ್ನು ಮತ್ತು ಅದಕ್ಕೆ ಪೂರಕವಾಗಿ ಗರ್ಭ ಪ್ರದೇಶವನ್ನು ಕುಂಬದ ರೀತಿಯುಲ್ಲಿಯೂ ಮುಂದುವರಿಯುತ್ತ ಸ್ತನಗಳನ್ನು ದುಂಡಗೆ ರಚಿಸಿರುವುದು ಮಾತೃತ್ವವನ್ನು ಸೂಚಿಸಲು ಆಗಿರುವುದರಿಂದ ಮುಖವನ್ನು ಮತ್ತು ತಲೆಯ ಭಾಗವನ್ನು ರಚಿಸಿದೆ ಬೆಳವಣಿಗೆ ಮತ್ತು ಸಂಪನ್ನತೆಯನ್ನು ಸೂಚಿಸಲು ಕಮಲವನ್ನು ರಚಿಸಿರ ಬಹುದಾಗಿದೆ.

ಅಧ್ಯಾಯ : ಐದು

## ಲಜ್ಜಾಗೌರಿ ಶಿಲ್ಪಗಳು ಮತ್ತು ಲೈಂಗಿಕತೆ

'ಲಜ್ಜಾಗೌರಿ' ಶಿಲ್ಪಗಳ ಪ್ರಸ್ತಾಪ ಬಂದಾಗ ನಮ್ಮ ಮನಸ್ಸಿನಲ್ಲಿ ಮೂಡುವುದು ಲೈಂಗಿಕತೆ ವ್ಯಕ್ತಪಡಿಸುವ ಶಿಲ್ಪಗಳೆನ್ನಬಹುದು. ಇದಕ್ಕೆ ಕಾರಣಗಳನ್ನು ಸುಲಭವಾಗಿ ಹೇಳುವುದು ಸಾಧ್ಯವಿಲ್ಲ, ಲೈಂಗಿಕತೆ ಮತ್ತು ಲೈಂಗಿಕ ಭಾವನೆ ಎನ್ನುವುದು ಮನುಷ್ಯನ ಮನಸ್ಸಿನಲ್ಲಿರುತ್ತದೆ. ಅದಕ್ಕೆ ಪ್ರಚೋದಕವಾಗುವಂತಹ ಯಾವುದೇ ಮಾಧ್ಯಮ ದೊರಕಿದರೂ ಅದು ತನ್ನ ಅಸ್ತಿತ್ವವನ್ನು (ಮಾನಸಿಕ ಸ್ಥಿತಿಯನ್ನು) ತೋರಿಸಿ ಬಿಡುತ್ತದೆ. ಅದು ಶೃಂಗಾರ ಚಿತ್ರಗಳಿರಬಹುದು ಅಥವಾ ಖಜುರಾಹೋದ ಮಿಥುನ ಶಿಲ್ಪಗಳಿರಬಹುದು. ಅಜಂತಾದ ಭಿತ್ತಿ ಚಿತ್ರಗಳಿರಬಹುದು. ಬೇಲೂರು ಹಳೇಬೀಡು ಮುಂತಾದೆಡೆ ಕೆತ್ತಲ್ಪಟ್ಟ, ಸುಂದರ ಸ್ತ್ರೀ ಪುರುಷ ಚಿತ್ರಗಳಿರಬಹುದು ಮತ್ತು ಲಜ್ಜಾಗೌರಿಯ ತರಹದ ಬೆತ್ತಲೆ ಸ್ತ್ರೀ ಶಿಲ್ಪಗಳಿರಬಹುದು, ಇಲ್ಲೆಲ್ಲಾ ಪ್ರಮುಖವಾಗಿ ನಮಗೆ ಮನಸ್ಸಿಗೆ ಕಂಡುಬರುವುದು ಲೈಂಗಿಕ ಭಾವನೆಯನ್ನು ವ್ಯಕ್ತ ಪಡಿಸುವ ಅಥವಾ ಆಕಡೆಗೆ ಮನಸ್ಸನ್ನು ಪ್ರಚೋದಿಸುವ ಭಾವನೆಯನ್ನು ಉದ್ದೀಪನಗೊಳಿಸಬಹುದಾದ ಸಾಧ್ಯತೆಯನ್ನುಂಟು ಮಾಡುವ ಚಿತ್ರಗಳು ಶಿಲ್ಪಗಳು ರಚನೆಯಾಗಿರುವುದು. ಇದು ಇನ್ನೊಂದು ರೀತಿಯಲ್ಲಿ ಹೇಳಬಹುದಾದರೆ ಮಾನವನ ಲೈಂಗಿಕತೆಯನ್ನು ಪ್ರಚೋದಿಸುವ ಶೃಂಗಾರಕ್ಕೆ ಮಹತ್ವವನ್ನು ನೀಡುವ ಉದ್ದೇಶದಿಂದ ರಚಿತವಾಗಿದೆ ಎನ್ನಬಹುದು ಕೃತಿ ರಚನೆಯ ಉದ್ದೇಶ ಅಥವಾ ಒನ್ನೆಲೆ ಬೇರೆಯಾಗಿದ್ದರೂ ಅಂತಿಮ ಗುರಿ ಮನುಷ್ಯನ ಮನಸ್ಸಿನ ಮೇಲೆ ಸುಪ್ತವಾಗಿರುವ

ಶೃಂಗಾರ ಮನೋಭಾವವನ್ನು ಅಭಿವ್ಯಕ್ತಿಸುವುದೇ ಆಗಿದೆ. ಭಾರತೀಯ ಶಿಲ್ಪಗಳು ಮತ್ತು ಅಲೌಕಿಕ ಆನಂದಾನುಭವ ಭಾರತೀಯ ದೃಷ್ಟಿಕೋನದಲ್ಲಿ ಅಲೌಕಿಕ ಅನುಭವ ಎನ್ನುವುದು ಪ್ರಾಪಂಚಿಕತೆಯನ್ನು ಮೀರಿದುದಾಗಿದೆ. ಈ ಅಲೌಕಿಕ ಅನುಭವಕ್ಕೆ ಹಲವಾರು ದಾರಿಗಳಿವೆ ಅವುಗಳಲ್ಲಿ ರಸಾನುಭವವೂ ಒಂದಾಗಿದೆ. ರಸಾನುಭವದ ಮೂಲಕ ಆನಂದಾನುಭವ ಈ ಆನಂದಾನುಭವವೇ ಅಲೌಕಿಕವಾದುದು ಇದನ್ನು ಹೊಂದುವುದೇ ಮಾನವನ ಮೂಲ ಉದ್ದೇಶವಾಗಬೇಕೆಂಬುದು ರಸ ಪಂಡಿತರ ವಾದವಾಗಿದೆ. ಈ ರಸಾನುಭವವು ಭರತನ ನಾಟ್ಯ ಶಾಸ್ತ್ರದಲ್ಲಿ ವರ್ಣಿಸಲ್ಪಟ್ಟಿದೆ. ಆಗಿನ ಕಾಲದ ತಾತ್ವಿಕರ ಅಭಿಪ್ರಾಯದ ಪ್ರಕಾರ ನವರಸಗಳು ವರ್ಣಿಸಲ್ಪಟ್ಟಿವೆ. ಇವುಗಳಲ್ಲಿ ಶೃಂಗಾರ ರಸವು ಮೊಟ್ಟ ಮೊದಲನೆಯದು ಮತ್ತು ಪ್ರಮುಖವಾದುದು. ಈ ಶೃಂಗಾರ ರಸಕ್ಕೆ ಮೂಲ ಕಾರಣ. ರತಿ ಭಾವ ಇವೆಲ್ಲವೂ ರಸ ಸಿದ್ಧಾಂತದ ಮಾತಾಗಿದೆ. ಈ ರಸ ಸಿದ್ಧಾಂತವು ಭಾರತೀಯ ಧಾರ್ಮಿಕ ಇತಿಹಾಸದ ತಳಪಾಯದಲ್ಲಿ ಸೇರಿಕೊಂಡಿದೆ ಹೀಗಿದ್ದರೂ ಭಾರತೀಯ ಮನೋಭಾವದಲ್ಲಿ ಶೃಂಗಾರವೆಂಬುದು ಲೈಂಗಿಕ ಮೂಲವಾಗಿದ್ದರೂ ಇದು ಪ್ರಾಪಂಚಿಕ ಮತ್ತು ದೈಹಿಕ ನೆಲೆಯಲ್ಲಿರದೆ ಮಾನಸಿಕ ಮತ್ತು ಅಲೌಕಿಕ ನೆಲೆಯಲ್ಲಿಯೇ ವ್ಯಕ್ತವಾಗಿದೆ.

ವಿದೇಶಿಯರನ್ನು ಅಥವಾ ಪಾಶ್ಚಾತ್ಯರಲ್ಲಿ ಇದು ದೈಹಿಕ ನೆಲೆಯಲ್ಲಿಯೇ ವ್ಯಕ್ತವಾಗಿದೆ. ಭಾರತೀಯ ಸಿದ್ಧಾಂತದಲ್ಲಿ ಪ್ರತಿಯೊಂದನ್ನು ಆದ್ಯಾತ್ಮಿಕ ನೆಲೆಗಟ್ಟಿನಲ್ಲಿಯೇ ನೋಡುವುದರಿಂದ ಇಲ್ಲಿ ಲೈಂಗಿಕತೆ ಕೂಡಾ ಮಾನವನ ಉನ್ನತಿಯ ಒಂದು ಅಂಗವೆಂದು ಪರಿಗಣಿಸಲ್ಪಟ್ಟಿದೆ. ಆದುದರಿಂದ ಇಲ್ಲಿ ರಚಿತವಾಗಿರುವ ಚಿತ್ರಗಳು ಶಿಲ್ಪಗಳು ಭಿತ್ತಿ ಚಿತ್ರಗಳಲ್ಲಿ ಲೈಂಗಿಕತೆಯಾಗಲಿ ನಗ್ನತೆಯಾಗಲಿ ಗುಪ್ತವಾಗಿರುತ್ತಿರಲಿಲ್ಲ. ಪ್ರಾಚೀನ ಕಾಲದಲ್ಲಿ ಈ ವಿಚಾರದಲ್ಲಿ ಜನರಲ್ಲಿ ಮಡಿವಂತಿಕೆ ಇರಲಿಲ್ಲ ಆಹಾರ ನಿದ್ರಾದಿಗಳಂತೆ ಮೈಥುನವೂ ಕೂಡಾ ಸಹಜ ಕ್ರಿಯೆಯಾಗಿದ್ದು ಅದರಲ್ಲಿ ಅಲೌಕಿಕ ಆನಂದವನ್ನು ಅನುಭವಿಸುವ ಸಾಧ್ಯತೆಯನ್ನು ಅಂದಿನ ಜನರು ಕಂಡುಕೊಂಡಿದ್ದರು. ಅದೇ ರೀತಿ ನಗ್ನತೆ ಕೂಡಾ. ಇಲ್ಲಿ ನಗ್ನತೆ (Nudity) ಎನ್ನುವುದು ಅಸಹ್ಯಕರ ಅಥವಾ ಅಶ್ಲೀಲ (Obseine) ಕರವಾಗಿರಲಿಲ್ಲ ಬದಲಾಗಿ ಅದು. ಕಲಾತ್ಮಕ ನೆಲೆಯಲ್ಲಿಯೇ ವ್ಯಕ್ತವಾಗಿದೆ. ಇಲ್ಲಿ ನಾವು ನೋಡ ಬೇಕಾದುದು ಬೆತ್ತಲೆ (Waked) ಮತ್ತು ನಗ್ನತೆ (Nuditey)ಗಳ ಮಧ್ಯದ ವ್ಯತ್ಯಾಸವನ್ನು ಇಲ್ಲಿ ಬೆತ್ತಲೆ ಎನ್ನುವುದು ಪ್ರಾಪಂಚಿಕ ನೆಲೆಯದ್ದಾಗಿದ್ದರೆ (Physical) ನಗ್ನತೆ ಎನ್ನುವುದು ಸೌಂದರ್ಯಾತ್ಮಕವಾಗಿದ್ದು (Aesthetical) ಭಾವ ಪ್ರಚೋಧಕವಾಗಿರುತ್ತಿದ್ದುದಾಗಿತ್ತು. ಆದುದರಿಂದಲೇ ಭಾರತೀಯ ನೆಲದಲ್ಲಿ ನಗ್ನತೆಯ ಕುರಿತಾದ ಸಾಕಷ್ಟು ವಿಚಾರಗಳು ಚರ್ಚೆಯಾಗುತ್ತಿದ್ದುದನ್ನು ಗಮನಿಸಬಹುದು. ಇಂತಹ ನಗ್ನತೆಯನ್ನು

ಎತ್ತಿ ತೋರಿಸುವಂತಹ ಚಿತ್ರಗಳ ಶಿಲ್ಪಗಳ ರಾಶಿಯನ್ನು ನಾವು ಇಲ್ಲಿ ಕಾಣುತ್ತೇವೆ. ಈ ಶಿಲ್ಪಗಳಾಗಲೀ ಚಿತ್ರಗಳಾಗಲೀ ಬಾಹ್ಯ ನೋಟಕ್ಕೆ ನಗ್ನವಾಗಿದ್ದರೂ ಇವು ಭಾವ ಪ್ರಚೋಧಕಗಳಾಗಿದ್ದು ಮಾನವನಲ್ಲಿ ಕೇವಲ ಲೈಂಗಿಕ ಉದ್ದೇಶಕ್ಕೆ ಕಾರಣವಾಗುವಂತಹ ವುಗಳಾಗಿರಲಿಲ್ಲ ಹಾಗಾಗಿ ಇವು ಅಸಹ್ಯಕರವೂ ಆಗಿರಲಿಲ್ಲ ಅಶ್ಲೀಲವೂ ಆಗಿರಲಿಲ್ಲ.

**ಬದಲಾದ ಪರಿಸ್ಥಿತಿ**

ಆದರೆ ಕಾಲ ಕ್ರಮೇಣ ಈ ಸ್ಥಿತಿ ಭಾರತದಲ್ಲಿಯೂ ಬದಲಾಯಿತು ಚೌಕಟ್ಟುಗಳು ಬದಲಾದವು ದೃಷ್ಟಿಕೋನವು ಬದಲಾಯಿತು. ಇದಕ್ಕೆ ಸಾಂಸ್ಕೃತಿಕ, ಧಾರ್ಮಿಕ ಹಾಗೂ ‘ರಾಜಕೀಯ’ ಕಾರಣಗಳು ಬಹಳವಾಗಿ ಕಾರಣವಾದವು ಮುಖ್ಯವಾಗಿ ಹನ್ನೆರಡನೇ ಶತಮಾನದ ವೈಚಾರಿಕ ಕ್ರಾಂತಿ ಪರಕೀಯರಾದ ಪಾಶ್ಚಾತ್ಯರಿಂದ ಭಾರತದ ಆಡಳಿತ, ಆ ಕಾಲಕ್ಕೆ ಬಹುಮಟ್ಟಿಗೆ ಪ್ರಭಾವ ಬೀರಿದ ಪಾಶ್ಚಾತ್ಯ ದೃಷ್ಟಿಕೋನ ಭಾರತದಲ್ಲೇ ಬೆಳೆದು ಬಂದ ಶಾಕ್ತ ಪಂಥ ಇತ್ಯಾದಿಗಳು ಹಿಂದೆ ಸರಿದು ವೈಷ್ಣವ ಭಕ್ತಿ ಪಂಥ ಹೆಚ್ಚಾಗಿ ಪ್ರಭಾವ ಬೀರಿದ್ದುದಲ್ಲದೆ, ಜೈನಧರ್ಮದ ವ್ಯಾಪಕತೆಯೂ ಸೇರಿದಂತೆ ಹಲವಾರು ಕಾರಣಗಳಿಂದ ಹಿಂದಿನ ಸಹಜ ಮನೋಧರ್ಮದಿಂದಾಗಿ ಅಲ್ಲಿ ಶೀಲ ಅಶ್ಲೀಲದ ಚೌಕಟ್ಟು ನಿರ್ಮಾಣವಾಯಿತು. ಮಡಿವಂತಿಕೆ ಪ್ರಾಧ್ಯಾನ್ಯತೆ ಪಡೆಯಿತು. ಮುಂದಕ್ಕೆ ಪ್ರತಿಯೊಂದನ್ನು ಈ ದೃಷ್ಟಿಕೋನದಲ್ಲಿ ನೋಡುವುದು ಸಾಮಾನ್ಯವಾಯಿತು.

ನಮ್ಮ ಕಲಾವಿದರು ಶಿಲ್ಪಗಳಲ್ಲಿ ಕಾಮವನ್ನು ಕಂಡರೆ ಭಯವಿರಲಿಲ್ಲ. ತಿರಸ್ಕಾರವೂ ಇರಲಿಲ್ಲ. ಕಾಮವನ್ನು ಒಪ್ಪಿಕೊಳ್ಳುತ್ತಲೇ ಅದರಾಚೆಗೆ ನಡೆಯುವಂತಹ ಕಲಾವಿದರ ಈ ಧೋರಣೆಯನ್ನು ಅಂದಿನ ಸಮಾಜವೂ ಆಧರಿಸಿತ್ತು. ಅಂತೆಯೇ ಅದನ್ನು ಬದುಕಿನ ಸ್ವಾಭಾವಿಕ ಸಂಗತಿಗಳಂತೆ ನಮ್ಮ ಶಿಲ್ಪಿಗಳು, ಕಲಾವಿದರು ಸೃಷ್ಟಿಸಿದರು. ಇಂದು ನಾವು ಅತ್ಯಂತ ಪವಿತ್ರವೆಂದು ಭಾವಿಸುವ ಸಂಸ್ಕೃತಿಯ ಕೇಂದ್ರವೆಂದು ಭಾವಿಸುವ ದೇವಾಲಯಗಳಲ್ಲೇ ಇವುಗಳನ್ನು ಹೆಚ್ಚಾಗಿ ಸೃಷ್ಟಿಸಿರುವುದೂ ಇದನ್ನೇ ಸೂಚಿಸುತ್ತದೆ. ಇವುಗಳು ಶಿಲ್ಪಿಯೊಬ್ಬನ ಅಥವಾ ಕೆಲವು ಶಿಲ್ಪಿಗಳು ಸೃಷ್ಟಿಯಾದರೂ ಆ ಕಾಲದಲ್ಲಿನ ಎಲ್ಲ ಕಲೆಗಳೂ ವೈಯಕ್ತಿಕ ಅಭಿವ್ಯಕ್ತಿಗಿಂತ ಸಮಾಜ ಮನಸ್ಸಿನ ಅಭಿವ್ಯಕ್ತಿಯೇ ಆಗಿದ್ದವು ಹೀಗಾಗಿ ಈ ನಗ್ನ ಹಾಗೂ ಮಿಥುನ ಶಿಲ್ಪಗಳೆಲ್ಲದರ ಹಿಂದೆ ಕೆಲಸ ಮಾಡಿರುವುದು ಸಮುದಾಯಿಕ ಸುಪ್ತಪ್ರಜ್ಞೆಯೇ (Collective Conscious) ಆಗಿದೆ. ಅಂದರೆ ಅವುಗಳೆಲ್ಲ ಸಾಮಾಜಿಕ ಆಕಾಂಕ್ಷೆಯ ಫಲವಾಗಿಯೇ ರೂಪುಗೊಂಡವು.[೧]

---

೦೧. ಚಿ.ಸು ಕೃಷ್ಣಶೆಟ್ಟಿ : ಚಿತ್ರ-ಚಿತ್ತ, ಪುಟ-೧೦

ಭಾರತದಲ್ಲಿ ನಗ್ನ ಶಿಲ್ಪಗಳು ಬಹುಸಾಮಾನ್ಯವಾಗಿದ್ದವು. ಎಲ್ಲಾ ದೇವ ದೇವತೆಗಳು ಕೂಡಾ ಹೆಚ್ಚಾಗಿ ನಗ್ನ ಅಥವಾ ಅರೆನಗ್ನವಾಗಿ ಉಡುಪು ಧರಿಸಿದ್ದರೂ ಅವು ಕೇವಲ ನಗ್ನ ಶಿಲ್ಪಗಳ ಮೇಲೆ ವಸ್ತ್ರದ ಗುರುತನ್ನು ತೋರಿಸುವಂತಹ ಗೆರೆಗಳ ಮೂಲಕ ರಚಿಸಿರುವುದನ್ನು ಕಾಣುತ್ತೇವೆ. ಈ ರೀತಿಯ ಶಿಲ್ಪಗಳು ಕ್ರಿಸ್ತ ಪೂರ್ವದಿಂದಲೇ ನಮಗೆ ಕಂಡುಬರುತ್ತವೆ. ಈ ರೀತಿಯ ಶಿಲ್ಪಗಳು ಯಕ್ಷ ಯಕ್ಷಿಯರ ಶಿಲ್ಪಗಳ ರಚನೆಯೊಂದಿಗೆ ಹೆಚ್ಚಾಗಿ ಬೆಳವಣಿಗೆ ಹೊಂದಿರಬಹುದೆನ್ನಿಸುತ್ತದೆ. ಅದಕ್ಕಿಂತಲೂ ಮೊದಲೇ ಈ ರೀತಿಯ ಶಿಲ್ಪಗಳ ರಚನೆಯಾಗಿದ್ದರೂ ದೊಡ್ಡ ಆಕಾರದ ಶಿಲ್ಪಗಳಾಗಲಿ ಅಥವಾ ರಾಶಿಯಾಗಲಿ ದೊರತಿಲ್ಲ. ಆದುದರಿಂದ ಕ್ರಿ.ಶ. ಆರಂಭದ ಆಸುಪಾಸಿನಿಂದ ಈಚಿನ ಶಿಲ್ಪಗಳು ಹೆಚ್ಚು ಮಹತ್ವ ಪಡೆಯುತ್ತವೆ. ಮಾತೃದೇವತೆಯ ಶಿಲ್ಪಗಳ ರಚನೆಯೊಂದಿಗೆ, ಇವು ಪ್ರಾರಂಭವಾದರೂ ನಂತರದ ದಿನಗಳಲ್ಲಿ ಬಹಳಷ್ಟು ಬೆಳವಣಿಗೆಗೊಂಡವು. "ನಮ್ಮ ದೇಶದಲ್ಲಿನ ಮೂರ್ತಿ ಶಿಲ್ಪಗಳಲ್ಲಿ ಪ್ರಾಚೀನ ವಾದವುಗಳೆಂದರೆ ಯಕ್ಷ ಯಕ್ಷಿಣಿಯರ ಚಿತ್ರಣ ಕ್ರಿ. ಪೂ. ೨೦೦ ರಷ್ಟು ಹಿಂದೆಯೇ ನಮ್ಮ ದೇಶದ ಸಾಂಸ್ಕೃತಿಕ ಕೇಂದ್ರಗಳೆನಿಸಿದ್ದ ಸಾಂಚಿ, ಬಾರ್ಹುತ್, ಬುದ್ದಗಯಾ, ಮೊದಲಾದ ಬೌದ್ಧ ಸ್ತೂಪಗಳಲ್ಲಿ ಇವು ಕಂಡುಬರುತ್ತವೆ. ಮಥುರಾ ಶಿಲ್ಪ ಪದ್ಧತಿಯಲ್ಲಿ ಕೂಡಾ ಈ ಯಕ್ಷ ಯಕ್ಷಿಣಿಯರ ಚಿತ್ರಣಕ್ಕೆ ಪ್ರಾಮುಖ್ಯತೆ ನೀಡಲಾಗಿದೆ.[೨] ಈ ಯಕ್ಷ ಯಕ್ಷಿಯರನ್ನು ದೇವತಾ ಯೋನಿಯಲ್ಲಿ ಸೇರಿದವರೆಂದು ಭಾವಿಸಲಾಗಿತ್ತು ಈ ಶಿಲ್ಪಗಳು. ಇವುಗಳಲ್ಲದೆ. ಇನ್ನೂ ಒಂದು ರೀತಿಯ ಶಿಲ್ಪಗಳನ್ನು ನಾವು ಕಾಣಬಹುದು. ಅವುಗಳೆಂದರೆ ಗಣಗಳು ಯಕ್ಷರು, ಕಿನ್ನರರು ಈ ರೀತಿಯಾಗಿರುವ ಶಿಲ್ಪಗಳು ಇವುಗಳ ಅಲಂಕಾರಿಕ ಹಿನ್ನೆಲೆಯಲ್ಲಿಯೇ ರಚಿತವಾಗಿದ್ದರೂ ತಾಳಮಾನ ಅಳತೆ ಇತ್ಯಾದಿಗಳಿಂದಾಗಿ ಇವು ವಿಭಿನ್ನವಾಗಿ ನಿಲ್ಲುತ್ತವೆ.

### ಲಜ್ಜಾಗೌರಿ ಶಿಲ್ಪಗಳು

ಮೇಲೆ ಹೇಳಿದ ವಿವಿಧ ಶಿಲ್ಪ ಪ್ರಕಾರಗಳನ್ನು ಗಮನಿಸಿದಾಗ ಲಜ್ಜಾಗೌರಿ ಶಿಲ್ಪಗಳನ್ನು ನಾವು "ಲೈಂಗಿಕ" ಶಿಲ್ಪ ಎಂದು ಗುರುತಿಸುವುದರಲ್ಲಿ ಹೆಚ್ಚಿನ ಅರ್ಥ ಸಾಧ್ಯತೆ ಇದೆ. ಇದಕ್ಕೆ ಕಾರಣ ಈ ಶಿಲ್ಪದ ಮೇಲ್ನೋಟ ಮತ್ತು ಇಂದಿನ ಕಾಲಕ್ಕೆ ಜನರು ಈ ಶಿಲ್ಪಗಳನ್ನು ನೋಡುವ ರೀತಿ ಈ ಹಿಂದಿನ ಅಧ್ಯಾಯಗಳಲ್ಲಿ ಚರ್ಚಿಸಿದಂತೆ ಈ ಶಿಲ್ಪಗಳು ತಾಂತ್ರಿಕ ಆಚರಣೆಗಾಗಿ ರಚಿತವಾಗಿದ್ದರೂ ಅಥವಾ ಮಾತೃದೇವತೆಯ ಮುಂದುವರಿದ ಭಾಗವಾಗಿ ಗುರುತಿಸಲ್ಪಟ್ಟರೂ ಇಂದಿನ ಕಾಲಕ್ಕೆ ಇದನ್ನು ಲೈಂಗಿಕ ಶಿಲ್ಪವೆಂದು ಗುರುತಿಸಿದರೆ ತಪ್ಪಾಗಲಾರದು.

---

೦೨. ಜಿ.ಸು ಕೃಷ್ಣಶೆಟ್ಟಿ : ಚಿತ್ರ-ಚಿತ್ತ, ಪುಟ-೧೦

ಮುಖ್ಯವಾಗಿ ಬೆತ್ತಲೆಗೌರಿ ಎಂದು ಕರೆಯಲಾಗುವ ಲಜ್ಜಾಗೌರಿ ಶಿಲ್ಪಗಳು ವ್ಯಕ್ತ ಪಡಿಸುವುದು, ಲೈಂಗಿಕವಾಗಿ ಪ್ರಾಧ್ಯಾನತೆಯನ್ನು ಪಡೆಯುವ ಯೋನಿ, ತೊಡೆ, ಸೊಂಟ ಮತ್ತು ಸ್ತನಗಳ ಲೈಂಗಿಕ ಕ್ರಿಯೆಯಲ್ಲಿ ಪ್ರಮುಖವಾದವುಗಳು ಯೋನಿಯು ಸೃಷ್ಟಿಯನ್ನು ಮತ್ತು ಸ್ತನಗಳು ಪಾಲನೆಯನ್ನು ವ್ಯಕ್ತಪಡಿಸುತ್ತವೆಯಾದರೂ ಸೃಷ್ಟಿಯ ಮಾರ್ಗವು (ಪ್ರವೇಶ) ಯೋನಿಯೇ ಆಗಿದೆ. ಪುರುಷರಲ್ಲಿ ಕಾಮೋತ್ತೇಜನವನ್ನುಂಟು ಮಾಡುವ ಸ್ತನ ಕೂಡಾ ಅಷ್ಟೇ ಮಹತ್ವದಾಗಿದೆ. ಇಂದಿನ ಕಾಲದಲ್ಲಿ ಇವುಗಳು ಬಹಿರಂಗ ಪ್ರದರ್ಶನ ಅಶ್ಲೀಲವೆಂದು ಪರಿಗಣಿಸಲ್ಪಟ್ಟಿದೆ. ಹಿಂದಿನ ದಿನಗಳಲ್ಲಿ ಈ ಗುಪ್ತಾಂಗಕ್ಕೆ ವಿಶೇಷ ಮಹತ್ವವಿದ್ದಿತ್ತು. ಆದುದರಿಂದಲೇ ಯೋನಿ ಪೂಜೆಯು ಸಾಮಾನ್ಯವಾಗಿತ್ತು. ಅತ್ಯಂತ ಪುರಾತನ ಶಿಲ್ಪಗಳಲ್ಲಿ ಒಂದಾದ ನಾಗಾರ್ಜುನಕೊಂಡದಲ್ಲಿ ದೊರಕಿರುವ ಯೋನಿಮೂರ್ತಿಯ ಶಿಲ್ಪ ಮಧ್ಯ ಪ್ರದೇಶದ ಭೇಡಾಘಾಟ್‌ನಲ್ಲಿರುವ ಅರವತ್ತನಾಲ್ಕು ಯೋಗಿನಿಯರ ಮಂದಿರದಲ್ಲಿರುವ ಯೋನಿ ಪೂಜೆ ಮಾಡುತ್ತಿರುವ ಶಿಲ್ಪ, ಮಹಾರಾಷ್ಟ್ರದ ಅಹಮದ ನಗರದ ನೇವಾಸೆ ಎಂಬಲ್ಲಿ ದೊರೆತ ಯೋನಿ ಮೂರ್ತಿಯ ಶಿಲ್ಪಗಳನ್ನು ನೋಡಿದರೆ ಅಂದಿನ ಕಾಲದಲ್ಲಿ ಯೋನಿ ಪೂಜೆಯು ಸರ್ವ ಸಾಮಾನ್ಯವಾಗಿ ಚಲಾವಣೆಯಲ್ಲಿತ್ತು ಎಂಬುದು ನಮಗೆ ಕಂಡು ಬರುತ್ತದೆ.

**ಲಿಂಗ ಮತ್ತು ಯೋನಿ ಶಿಲ್ಪಗಳು**

ಯೋನಿ ಶಿಲ್ಪಗಳು ಅಥವಾ ಲಜ್ಜಾಗೌರಿ ಶಿಲ್ಪಗಳು ಮಾತೃದೇವತೆಯನ್ನು ಅಥವಾ ಶಕ್ತಿಯನ್ನು ಪ್ರತಿನಿಧಿಸಿದರೆ ಲಿಂಗ ಶಿಲ್ಪಗಳು ಪುರುಷನನ್ನು ಮತ್ತು ಪುರುಷತ್ವವನ್ನು ಶಿವನನ್ನು ಪ್ರತಿನಿಧಿಸುವ ಶಿಲ್ಪಗಳು ಇವನ್ನು ಶಿವಲಿಂಗಗಳೆಂದು ಹೇಳಲಾಗುತ್ತದೆ. ಶಿವನಿಗೆ ಮಹಾಲಿಂಗವೆಂಬ ಹೆಸರು ಕೂಡಾ ಇದೆ. ಭಾರತದಲ್ಲಿ ಮೊಟ್ಟ ಮೊದಲ ಲಿಂಗರೂಪ ಶಿವನ ಮೂರ್ತಿಯು ಉತ್ತರ ಆರ್ಕಾಟ್ ಜಿಲ್ಲೆಯ ರೇಣುಗುಂಟಾ ಬಳಿ ಇರುವ ಗುಡಿಮಲ್ಲಂ ಎಂಬಲ್ಲಿ ಕಂಡು ಬರುತ್ತದೆ.

ಕ್ರಿ.ಪೂ. ೨ನೇ ಶತಮಾನದ್ದೆಂದು ಹೇಳಲಾದ ಈ ಶಿಲ್ಪವು ಸಿಶ್ನದರೂಪವನ್ನೇ ಬಹುತೇಕ ಹೋಲುತ್ತದೆ. ಸಿಂಧೂ ಸಂಸ್ಕೃತಿಯ ಅವಶೇಷಗಳಲ್ಲೂ ಲಿಂಗ ದೊರೆತಿದೆ. ಕ್ರಿ. ಪೂ. ಮೂರು ಸಾವಿರ ವರ್ಷಗಳ ಸುಮಾರಿನ ಮಹೆಂಜೊದಾರೋವಿನಲ್ಲಿ ದೊರೆತ ಊರ್ದ್ವಲಿಂಗ ಕೂಡಾ ಸಾಮಾನ್ಯ ಸಿಶ್ನದ ಪ್ರತಿರೂಪದಂತಿದೆ. ಈಶ್ವರನನ್ನು ಲಿಂಗದ ಆಕೃತಿಯಲ್ಲಿ ಪೂಜಿಸುವಂತೆಯೇ ಲಿಂಗದಲ್ಲಿ ಶಿವನ ಮುಖವನ್ನು ರೂಪಿಸಿದಂತಹ ಮುಖ ಲಿಂಗಗಳೂ ಹಲವೆಡೆ ದೊರೆಯುತ್ತವೆ. ಶಿವಮೊಗ್ಗ ಜಿಲ್ಲೆಯ ಆನವಟ್ಟಿಯ ಬಳಿಯ ಭಾರಂಗಿಯ ಕಲ್ಲೇಶ್ವರ ದೇವಾಲಯದಲ್ಲಿರುವ

ಮುಖಲಿಂಗವು ಈ ಬಗೆಯದು. ಅಂತೆಯೇ ವೈದಿಕ ಸಾಹಿತ್ಯದಲ್ಲಿ 'ಶಿಶ್ನದೇವಾ' ಎನ್ನುವ ಉಲ್ಲೇಖವಿದೆ. ಶತಮಾನಗಳ ಹಿಂದಿನ ನಮ್ಮ ಸಾಹಿತ್ಯ ಕಲೆಗಳಲ್ಲಿ ಈ ಬಗೆಯ ನೂರಾರು ಉದಾಹರಣೆಗಳು ದೊರೆಯುತ್ತವೆ ಇಲ್ಲೆಲ್ಲಾ ಪೌರುಷ ಸಂಕೇತವಾದ, ಸೃಷ್ಟಿ ಪ್ರಕ್ರಿಯೆಯ ಹಿಂದಿನ ನಿಜಶಕ್ತಿಯಾದ ಪುರುಷ ಜನಾಂಗವನ್ನು ಗೌರವ ಭಾವದಿಂದ ನೋಡಲಾಗಿದೆ.[೩]

ಭಾರತದಲ್ಲಿ ವೇದಕಾಲದ ನಂತರ ಕಾಲದಲ್ಲಿ ಶಿವ ಮತ್ತು ಶಕ್ತಿಯರ ಆರಾಧನೆ ಹೆಚ್ಚಿನ ಮಟ್ಟದಲ್ಲಿ ಬೆಳವಣಿಗೆ ಕಂಡುಬಂದುದು ಎಲ್ಲರಿಗೂ ತಿಳಿದ ವಿಚಾರ ಈ ಶಿವ ಮತ್ತು ಶಕ್ತಿಯರ ಪ್ರಾತಿನಿಧಿಕ ರೂಪವೇ ಲಿಂಗ ಮತ್ತು ಯೋನಿಗಳು ಶಿವಾರಾಧನೆ ಅಥವಾ ಶಿವ ಕೇಂದ್ರಗಳಲ್ಲಿ ಪ್ರತಿಷ್ಠಾಪಿಸಲಾಗಿರುವ ಶಿವಲಿಂಗಕ್ಕೆ ಪಾಣಿಪೀಠಗಳಿರುತ್ತವೆ. ಸ್ವಯಂಭೂ ಅಥವಾ ಉದ್ಭವಲಿಂಗಗಳನ್ನು ಹೊರತು ಪಡಿಸಿ ಸ್ಥಾಪಿತ ಲಿಂಗಗಳು ಪಾಣಿಪೀಠಗಳನ್ನು ಹೊಂದಿರುತ್ತವೆ. ಇವು ಯೋನಿ ಸೂಚಕಗಳೆ ಇವುಗಳು ಆಕಾರವೂ ಅದೇ ರೀತಿ ಇರುತ್ತದೆ. ವಿದ್ವಾಂಸರು ಒಪ್ಪಿಕೊಂಡಿರುವಂತೆ ಈ ರೀತಿಯ ಲಿಂಗಗಳಲ್ಲಿ ಸೂಕ್ಷ್ಮವಾಗಿ ಗಮನಿಸಿದಾಗ ಇವು ಯೋನಿ ಮೂಲಕ ಪ್ರವೇಶಿಸಿದ ಶಿಶ್ನದ (ಲಿಂಗದ) ರೂಪದಲ್ಲಿರುತ್ತವೆ. ಇದನ್ನು ಅರ್ಥ ಮಾಡಿಕೊಂಡಾಗ ನಮಗೆ ಇದರ ಹಿನ್ನೆಲೆ ಅರ್ಥವಾಗಬಹುದು ಇವು ಶಿವ ಮತ್ತು ಶಕ್ತಿಯರು ಕೂಡಿರುವುದಾದರೆ ಇವುಗಳಿಗಿಂತ ಭಿನ್ನವಾಗಿ ನಾವು ನೋಡುವುದು ಯೋನಿ ಶಿಲ್ಪಗಳು ಮೊದಲೇ ಉಲ್ಲೇಖಿಸಿದಂತೆ ನಾಗಾರ್ಜುನಕೊಂಡ, ತೇರಾ, ನೇವಾಸ ಮುಂತಾದೆಡೆಗಳಲ್ಲಿ ದೊರಕಿರುವ ಶಿಲ್ಪಗಳನ್ನು ಗಮನಿಸಿ ಹೇಳುವುದಾದರೆ ಇವು ಲಜ್ಜಾಗೌರಿಯ ಪ್ರಾರಂಭಕಾಲದ ಶಿಲ್ಪಗಳಾಗಿವೆ. ಇಲ್ಲಿ ಯೋನಿಯನ್ನಷ್ಟೇ ಮುಖ್ಯವಾಗಿ ತೋರಿಸಿ ಮುಂದಿನ ಶಿಲ್ಪಗಳಲ್ಲಿ ನಾವು ಪರಿಪೂರ್ಣತೆಯನ್ನು ಕಾಣುತ್ತೇವೆ. ಅಂದರೆ ಯೋನಿಯಷ್ಟೇ ಸ್ತನಗಳಿಗೂ ಮಹತ್ವ ಕೊಟ್ಟಿರುವುದು ಕಂಡು ಬರುತ್ತದೆ.

ಲಜ್ಜಾಗೌರಿ ಶಿಲ್ಪಗಳು ಯೋನಿ ಮತ್ತು ಸ್ತನಗಳಿಗೆ ಮಹತ್ವಕೊಟ್ಟು ರಚಿಸಲಾದ ಶಿಲ್ಪಗಳು ಲೈಂಗಿಕತೆಯನ್ನು ವ್ಯಕ್ತ ಪಡಿಸುವ ಶಿಲ್ಪಗಳು ಹಿಂದಿನ ಕಾಲದಲ್ಲಿ ಯೋನಿಗೆ ಬಹಳ ಮಹತ್ವದ ಸ್ಥಾನವಿದ್ದಿತ್ತು. ಎನ್ನುವುದು ನಮಗೆ ಬೇರೆ ಬೇರೆ ಗ್ರಂಥಗಳಿಂದ ಕಂಡು ಬರುತ್ತದೆ. ಸ್ತ್ರೀಯೋನಿಯನ್ನು ಕೇವಲ ಯೋನಿಯನ್ನಾಗಿ ನೋಡದೆ ಅದನ್ನು ಯಜ್ಞ ವೇದಿ ಎಂದೂ ಪಾಣಿಪೀಠವೆಂದು ಗಮನಿಸಿರುವದು ಮುಖ್ಯವಾಗುತ್ತದೆ ಅಷ್ಟೇ ಅಲ್ಲದೆ ಅದೇ ರೀತಿ ಬಾಗಿಲುಗಳು ಕಲ್ಲಾಸರೆಗಳು (ಎರಡು ಕಲ್ಲುಗಳು ಕೂಡಿರುವ ಜಾಗೆಗಳು) ಇಂತಹ ಭಾಗಗಳನ್ನು ಯೋನಿ ಎಂದೇ ಹೇಳುತ್ತಾರೆ. ಅಲ್ಲದೆ ಯೋನಿಯನ್ನು ಬಾಗಿಲು ಎಂದೂ ಕರೆದಿರುವುದನ್ನು ಕಾಣಬಹುದು

೦೩. ಜಿ.ಸು ಕೃಷ್ಣಶೆಟ್ಟಿ : ಚಿತ್ರ-ಚಿತ್ತ, ಪುಟ-೧೧

ಗುಪ್ತಾಂಗವೆಂದರೆ ಒಂದು ರೀತಿಯು ನಾಚಿಕೆ. ಸ್ವಲ್ಪ ಅಸಹ್ಯವಾದರೆ ಆಗಲಿ, ಸತ್ಯವನ್ನು ಅಸತ್ಯವನ್ನಾಗಿ ಸಾದಿಸಲು ಪ್ರಯತ್ನ ಮಾಡುವುದು “ನಮ್ಮ ಸಭ್ಯ ಬುದ್ಧಿವಂತರಿಗೆ” ಯೋಗ್ಯವಾದ ಕೆಲಸವಲ್ಲ. ಗುಪ್ತಾಂಗವೆಂದರೆ ಅಸಹ್ಯಪಡಬೇಕಾದ್ದೇನೂ ಇಲ್ಲ. ನಮ್ಮ ಉಪನಿಷತ್ತುಗಳಲ್ಲಿ ನಮ್ಮ ಪೂರ್ವಿಕರು ಅಧಕ್ಕೆ ಬಹುಗೌರವವನ್ನು ಕೊಟ್ಟಿದ್ದಾರೆ. ಬೃಹದಾರಣ್ಯಕ ಉಪನಿಷತ್ತಿನಲ್ಲಿ “ಸ್ತ್ರೀ ಅಧೋಭಾಗ” (ಉಪಸ್ಥ)ವನ್ನು ಯಜ್ಞವೇದಿಯೆಂದು ಭಾವಿಸಬೇಕೆಂದೂ, ಅದರ ಹೊರಗಿನ ಚರ್ಮವನ್ನು, ಕೂದಲುಗಳನ್ನು ಯಜ್ಞಕ್ಕೆ ಸಂಬಂಧಿಸಿದ ವಿವರಗಳೊಡನೆ ಮಹಾಪವಿತ್ರವಾದ ವಿಷಯುಗಳೆಂದು ಭಾವಿಸಬೇಕೆಂದೂ ಸೂಚಿಸಿದ್ದಾರೆ. ಸಂಭೋಗದ ಸಮಯದಲ್ಲಿ ಈ ವಿಷಯುವನ್ನು ಜ್ಞಾಪಿಸಿಕೊಳ್ಳುವವರು. ವಾಜಪೇಯ ಯಜ್ಞವನ್ನು ಮಾಡಿದ ಪುಣ್ಯವನ್ನು ಹೊಂದುತ್ತಾರೆಂದು ಹೇಳಲಾಗಿದೆ.[೪]

ಲಜ್ಜಾಗೌರಿ ಶಿಲ್ಪಗಳಲ್ಲಿ ನಾವು ಕಾಣುವುದು ಯೋನಿ ಮತ್ತು ಸ್ತನಗಳನ್ನು ಇವುಗಳ ಲೈಂಗಿಕತೆಗೆ ನೇರ ಸಂಬಂಧ ಪಟ್ಟವೆಂದು ಮೊದಲೇ ಹೇಳಲಾಗಿದೆ. ಈ ಶಿಲ್ಪಗಳಲ್ಲಿ ಹೆಚ್ಚಿನವು ಸಂಭೋಗಾಸನದಲ್ಲಿರುವ ಶಿಲ್ಪಗಳು ಕೆಲವೊಂದು ಪ್ರಸವಕಾಲದ ಹೆಣ್ಣಿನ ಶಿಲ್ಪಗಳಂತಿದ್ದರೆ ಕೆಲವು ಶಿಲ್ಪಗಳು ತೊಡೆಯುಗಲಿಸಿ ಯೋನಿ ಪ್ರದರ್ಶನ ಮಾಡುತ್ತಿರುವಂತಿವೆ. ಶ್ರೀಮತಿ ಸ್ಟೆಲ್ಲಾಕ್ರಾಮಿಶ್ ಸೇರಿದಂತೆ ಹಲವಾರು ಜನ ಸಂಶೋಧಕರು ಈ ಶಿಲ್ಪಗಳು ಉತ್ಥಾನ ಪಾದ ಆಸನದಲ್ಲಿವೆ ಎಂದು ಗುರುತಿಸಿದ್ದಾರೆ. ಆಲಂಪುರದ ನವಬ್ರಹ್ಮೇಶ್ವರ ದೇವಾಲಯದ ಶಿಲ್ಪದಲ್ಲಿ ಯೋನಿಯು ಸ್ಪಷ್ಟವಾಗಿ ಉಬ್ಬಿರುವಂತೆ ಎಲ್ಲಾ ವಿವರಗಳನ್ನು ಚಿತ್ರಿಸಿರುವುದನ್ನು ಗಮನಿಸಿದರೆ ಇದು ಕೇವಲ ಲೈಂಗಿಕ ಪ್ರದರ್ಶನವೇನೋ ಎಂದು ಅನ್ನಿಸದೇ ಇರದು.

ಇಲ್ಲಿ ಇನ್ನೊಂದು ವಿಚಾರ ನಾವು ಗಮನಿಸಬಹುದು ಈ ಶಿಲ್ಪಗಳನ್ನು ಬಂಜೆ (ಮಕ್ಕಳಾಗದ ಹೆಂಗಸರು) ಯರು ತೀರಾ ಖಾಸಗಿಯಾಗಿ ಈ ಶಿಲ್ಪಗಳ ಯೋನಿ ಭಾಗಕ್ಕೆ ಬೆಣ್ಣೆ ಹಚ್ಚಿ ನೆಕ್ಕುವುದು. ಇದು ಈ ಹೆಂಗಸರಲ್ಲಿ ಕಾಮೋತ್ತೇಜನಗೊಳಿಸಲು ಪೂರಕವೆಂಬ ನಂಬಿಕೆಯಿಂದ ಇಲ್ಲಿ ನಾವು ನೋಡಬೇಕಾದ ವಿಚಾರ ಗ್ರಾಮೀಣ ಭಾಗದ ಜನರಲ್ಲಿ ವಿಶೇಷವಾಗಿ ಹೆಂಗಸರಿಗೆ ಲೈಂಗಿಕ ವಿಚಾರಗಳ ತಿಳುವಳಿಕೆ ಕಡಿಮೆ ಇರುತ್ತಿತ್ತು. ಮಕ್ಕಳಾಗಲು ಕಾರಣವಾಗುವ ಕ್ರಿಯೆಗೆ ಬೇಕಾದ ಅಗತ್ಯತೆಗಳ ಕುರಿತು ಜ್ಞಾನ ಕಡಿಮೆ ಪುರುಷ ಶಿಶ್ನವು ಸ್ತ್ರೀಯೋನಿ ಮೂಲಕವೇ ಪ್ರವೇಶಿಸುವುದು... ಇತ್ಯಾದಿಗಳ ಕುರಿತು ಈಗಿನಂತೆ ವಿಜ್ಞಾನದ ಜ್ಞಾನ (ಲೈಂಗಿಕತೆಯು ಕುರಿತಾದ

---

೦೪. ಮೂಲ. ತಾಪಿ. ಧರ್ಮರಾವ್ ಅನು. ಎಸ್.ಆರ್. ಶಾಸ್ತ್ರೀ : ದೇವಾಲಯಗಳು ಮತ್ತು ಲೈಂಗಿಕಶಿಲ್ಪ, ಪುಟ-೭

ತಿಳುವಳಿಕೆ) ಬೆಳದಿರದ ಸಂದರ್ಭದಲ್ಲಿ ಈ ಶಿಲ್ಪಗಳ ತೆರೆದ ಯೋನಿಯ ಸ್ಥನದ ಪ್ರದರ್ಶನ ಭಂಗಿ ಮುಂತಾದವುಗಳ ಕುರಿತಾದ ತಿಳುವಳಿಕೆ ಕೊಡಲು ಈ ಶಿಲ್ಪಗಳ ಪೂರಕವಾಗಿರಲು ಸಾಕು. ನಮ್ಮ ಹೆಚ್ಚಿನ ದೇವಾಲಯಗಳಲ್ಲಿ ಸಂಭೋಗದ ವಿವಿಧ ಭಂಗಿಗಳು ಆಸನಗಳನ್ನು ಕುರಿತು ಚಿತ್ರಿಸ್ಸಿರುವುದು ಮದುವೆಯಾದ ಹೊಸತರಲ್ಲಿ ನವದಂಪತಿಗಳು ಈ ದೇವಾಲಯಗಳಲ್ಲಿರುವ ಶಿಲ್ಪಗಳನ್ನು ಪೂಜಿಸುವುದು ಮುಂತಾದವುಗಳು ತಲಾತಲಾಂತರದಿಂದ ನಡೆದು ಬಂದಿವೆ. ಈ ರೀತಿಯ ಲೈಂಗಿಕ ಜ್ಞಾನ ಬೋಧನೆ ಲಜ್ಜಾಗೌರಿ ಶಿಲ್ಪಗಳು ಪ್ರಮುಖ ಮಾಧ್ಯಮವಾಗಿದೆ. ಡಾ. ಎಂ.ಚಿದಾನಂದ ಮೂರ್ತಿಯವರು ಲಜ್ಜಾಗೌರಿ ಶಿಲ್ಪ ತೆರೆದ ಯೋನಿಯ ಸಂಭೋಗಕ್ಕೆ ಸಿದ್ದವಾಗಿರುವ ಹೆಣ್ಣಿನ ಸಂಕೇತವೆಂದು ಹೇಳಿದ್ದಾರೆ. "ಮಧ್ಯ ಮತ್ತು ಉತ್ತರ ಕರ್ನಾಟಕದಲ್ಲಿ ಲಜ್ಜಾಗೌರಿ ಎಂದು ಜನರಿಂದ ಕರೆಯಿಸಿಕೊಳ್ಳುವ ಕೆಲವು ಬೆತ್ತಲೆ ಸ್ತ್ರೀ ವಿಗ್ರಹಗಳು ತಮ್ಮ ವಿಶಿಷ್ಟ ಲಕ್ಷಣಗಳಿಂದಾಗಿ ರಹಸ್ಯಾತ್ಮಕವಾಗಿವೆ. ಬಾದಾಮಿಯ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿರುವ ಲಜ್ಜಾಗೌರಿ ಹೀಗಿದೆ. ಕುಕ್ಕರ ಕಾಲಿನಲ್ಲಿ ಕುಳಿತಿರುವ ಆಕೆಯ ಯೋನಿ ತೆರೆದು ಕೊಂಡಿದೆ. ಸ್ತನಗಳು ಎದ್ದು ಕಾಣುತ್ತವೆ. ಕೊರಳಲ್ಲಿ ಹಾರ ಎರಡೂ ಕೈಗಳಲ್ಲಿ ಬಳೆಗಳು, ತೋಳಬಂದಿಗಳಿದ್ದು ಎರಡೂ ಕೈಗಳಲ್ಲಿ ಕಮಲದ ಮೊಗ್ಗುಗಳನ್ನು ಹಿಡಿದಿದ್ದಾಳೆ. ಆದರೆ ತಲೆಯ ಭಾಗದಲ್ಲಿ ಅರಳಿದ ಒಂದು ಕಮಲವಿದೆ... ಒಂದು ವೇಳೆ ಅದು ಯೋಗಾಭ್ಯಾಸಕ್ಕೆ ಸಂಕೇತವಾಗಿದ್ದು ತಾಂತ್ರಿಕರ ಪೂಜಾ (ಮೂರ್ತಿಯಾಗಿ ಬಳಕೆ ಯಾಗುತ್ತಿದ್ದರೂ,) ಮೂಲತ: ಇತಿಹಾಸ ಪೂರ್ವದ ಕಾಲದಲ್ಲಿ ಲಜ್ಜಾಗೌರಿಯು ಫಲಶಕ್ತಿಗೆ ಸಂಬಂಧಿಸಿದ ಜಾನಪದ ಸೃಷ್ಟಿಯಾಗಿರುವಂತಿದೆ. ಎಲ್ಲ ದೇಶಗಳಲ್ಲೂ ಫಲಶಕ್ತಿ ದೇವತೆಯನ್ನು ಹೆಣ್ಣೆಂದೆ ಭಾವಿಸಿದ್ದಾರೆ."[೫]

ಬೆತ್ತಲೆ ಸ್ತ್ರೀ ಶಿಲ್ಪವೊಂದನ್ನು ಜಾನ್ ಫ್ಲೀಟರು ಮೊದಲ ಬಾರಿ ಮಹಾಕೂಟದಲ್ಲಿ ಇದನ್ನು ಕಂಡಾಗ ಶಿರೋಭಾಗವಿಲ್ಲದ ಅಶ್ಲೀಲ ಶಿಲ್ಪವೆಂದು ಕರೆದರು. ನಗ್ನ ಸ್ತ್ರೀ ಅಂಗಾತವಾಗಿ ಮಲಗಿ ತನ್ನ ಎರಡೂ ಕಾಲುಗಳನ್ನು ಮಡಚಿ ಯೋನಿಯು ಕಾಣಿಸುವಂತೆ ಮೇಲಕ್ಕೆಳೆದುಕೊಂಡು ತೊಡೆಗಳನ್ನು ಅಗಲಿಸಿದ ರೀತಿಯಲ್ಲಿ ಈ ಶಿಲ್ಪದ ರಚನೆ ಇರುತ್ತದೆ. ಅವಳು ಹೀಗೆ ಮಲಗಿ ಕಾಲೆತ್ತಿರುವ ಬಂಗಿಯನ್ನು ಉತ್ಥಾನಪಾದವೆಂದು ಹೇಳಲಾಗುತ್ತದೆ. ಕ್ಯಾಂಪಬೆಲ್ ಎಂಬುವರು ಲಜ್ಜಾಗೌರಿಯನ್ನು ಶಯನ ಶಿಲ್ಪವೆಂದು ಗುರುತಿಸಿದರು. ಅವರು ಮೊದಲ ಬಾರಿ ಮಹಾಕೂಟದ ಲಜ್ಜಾಗೌರಿಯನ್ನು ಕಂಡಾಗ ಅದು ಅಂಗಾತವಾಗಿ ಮಲಗಿದ ಸ್ಥಿತಿಯಲ್ಲಿಯೇ ಇದ್ದಿತ್ತೆಂದು ಹೇಳಿದ್ದಾರೆ ಕೆಲವು ವಿದ್ವಾಂಸರು ಲಜ್ಜಾಗೌರಿಯದು ಕುಳಿತ ಬಂಗಿ ಎಂದು ಗುರುತಿಸಿದ್ದಾರೆ....[೬]

---

೦೫. ಡಾ. ಎಂ.ಚಿದಾನಂದಮೂರ್ತಿ : ಚಿದಾನಂದ ಸಮಗ್ರ ಸಂಪುಟ-೩, ಪುಟ-೪೧೫-೪೧೬
೦೬. ಡಾ. ಶಿಲಾಕಾಂತ ಪತ್ತಾರ : ಬಾದಾಮಿ, ಸಾಂಸ್ಕೃತಿಕ ಅಧ್ಯಯನ, ಪುಟ-೧೬೯- ೧೭೦

ಇದನ್ನು ಗಮನಿಸಿದರೆ ಈ ಶಿಲ್ಪವು ಪ್ರಥಮವಾಗಿ ವಿದೇಶಿ ವಿದ್ವಾಂಸರಿಂದಲೇ ಅಶ್ಲೀಲವೆಂದು ಗುರುತಿಸಲ್ಪಟ್ಟದನ್ನು ಗಮನಿಸಬಹುದು. ಬದಲಾದ ಶೈಕ್ಷಣಿಕ, ಧಾರ್ಮಿಕ, ಸನ್ನಿವೇಶದಲ್ಲಿ ಈ ರೀತಿಯ ಮಡಿವಂತಿಕೆ ಮುಂದಕ್ಕೆ ಬೆಳೆದು ಬಂದುದನ್ನು ನಾವು ಗಮನಿಸಬೇಕು. ಆದರೂ ತೀರಾ ವೈಯಕ್ತಿಕ ನೆಲೆಯಲ್ಲಿ ಖಾಸಗಿಯಾಗಿ ಈ ಶಿಲ್ಪವನ್ನು ಪೂಜಿಸುವುದು. ನಡೆದೇ ಇದೆ. ಲಜ್ಜಾಗೌರಿಗೆ ಸಾರ್ವಜನಿಕ ಪೂಜೆಗಳು ಸಲ್ಲುವುದಿಲ್ಲ. ಪೂಜಾ ವಿಧಾನವು ರಹಸ್ಯವಾದುದು ಈ ಸಂತಾನ ನೀಡುವ ದೇವಿ ಶಿಲ್ಪದ ಯೋನಿಗೆ ಬೆಣ್ಣೆ ಹಚ್ಚಿ ಅದನ್ನು ನೆಕ್ಕಿ ಪ್ರಸಾದವೆಂದು ಪುತ್ರಾಕಾಂಕ್ಷಿ ಸ್ತ್ರೀ ಸ್ವೀಕರಿಸುತ್ತಾಳೆ.[೭] ಸಿದ್ದನಕೊಳ್ಳದ ಪರಿಸರದಲ್ಲಿ ಈಗಲೂ ಈ ಆಚರಣೆಯನ್ನು ನಾವು ನೋಡಬಹುದು.

ಲಜ್ಜಾಗೌರಿ ಶಿಲ್ಪಗಳನ್ನು ಲೈಂಗಿಕ ದೃಷ್ಟಿಕೋನದ ಹಿನ್ನೆಲೆಯಲ್ಲಿ ನಾವು ನೋಡಿದಾಗ ಗಮನಿಸಬಹುದಾದರು ಬೆತ್ತಲೆ ಬೈರವ ಶಿಲ್ಪಗಳು ಉತ್ತರ ಕರ್ನಾಟಕ ಭಾಗದಲ್ಲಿ ಈ ಶೀಲ್ಪಗಳೂ ಅಪರೂಪವೇನಲ್ಲ ಲಿಂಗ ರೂಪಿಯಾದ ಶಿವನನ್ನು ಬೆತ್ತಲೆ ಭೈರವನೆಂದೂ ಜನ ಕಂಡಿದ್ದಾರೆ. ಬೆತ್ತಲೆ ಪರಮೇಶ್ವರಿ ಮತ್ತು ಬೆತ್ತಲೆ ಬೈರವ ಶಿಲ್ಪಗಳಿಗೆ. ಸಂಬಂಧ ವಿದ್ದಿರಲೇಬೇಕು ಆದರೆ ಶಿವನನ್ನು ಬೆತ್ತಲೆ ಭೈರವನ ರೂಪದಲ್ಲಿ ನೋಡಿದಾಗ ಆತನಿಗೆ ಪೂರ್ಣವಾಗಿ ಪುರುಷ (ಶಿವ) ಮುಖವನ್ನು ಕೆತ್ತಿರುವುದು ಗಮನಾರ್ಹ ಮಹಾಕೂಟ ದೇವಾಲಯ ಆವರಣದಲ್ಲಿರುವ ಉರ್ಧ್ವರೇತೇಶ್ವರನೆಂದು ಕೆರೆಯಲ್ಪಡುವ ಈ ಶಿಲ್ಪದಲ್ಲಿ ಈಶ್ವರನು ಅಪಸ್ಮಾರನ ಮೇಲೆ ಸಮಬಂಗಿಯಲ್ಲಿ ನಿಂತಿದ್ದಾನೆ. ತನ್ನ ಲಿಂಗವು ಸಂಪೂರ್ಣ ಮೇಲ್ಮುಖವಾಗಿ ಉರ್ದ್ವ ಮುಖವಾಗಿರುವುದರಿಂದ ಈ ಶಿಲ್ಪವು ಉರ್ದ್ವರೇತೇಶ್ವರವೆಂದು ಕರೆಯಲ್ಪಟ್ಟಿದೆ.

ಪ್ರಸನ್ನವದನಾಗಿರುವ ಈ ಶಿಲ್ಪವನ್ನು ನೋಡಿದಾಗ ಲೈಂಗಿಕ ಭಂಗಿಗಳಾಗಲಿ ಭಾಗಗಳಾಗಲಿ ಅಂದಿನಕಾಲದಲ್ಲಿ ಪ್ರದರ್ಶಿಸುವುದು ಸಾಮಾನ್ಯವಾಗಿತ್ತು ಎಂದು ಕಂಡು ಬರುವುದು ಇದೇ ದೇವಾಲಯ ಸಮುಚ್ಚಯದಲ್ಲಿ ಮೈಥುನಕ್ಕೆ ಸಂಬಂಧಿಸಿದ ಹಲವಾರು ಇತರ ನಗ್ನ ಶಿಲ್ಪಗಳೂ ಇವೆ. ಇವುಗಳನ್ನೆಲ್ಲಾ ಸೂಕ್ಷ್ಮವಾಗಿ ಗಮನಿಸಿದಾಗ ಈ ಲಜ್ಜಾಗೌರಿ ಶಿಲ್ಪಗಳಿಗೂ ಈ ಪ್ರದೇಶಗಳಲ್ಲಿ ಕಾಣುವ ಹಲವಾರು ಪುರುಷ ಲಿಂಗಾಕಾರದ ಶಿಲ್ಪಗಳಿಗೂ ಅರ್ಧನಾರೀಶ್ವರ ಊರ್ಧ್ವರೇತೇಶ್ವರ ಶಿಲ್ಪಗಳಿಗೂ ಯಾವುದೋ ರೀತಿಯ ಸಂಬಂಧ ವಿರಲೇಬೇಕು. ಮುಖ್ಯವಾಗಿ ಲೈಂಗಿಕ ಆಚರಣೆಗಳು ಮುಖ್ಯವಾಗಿ ಇಲ್ಲಿ ಪ್ರಧಾನವಾಗಿದ್ದಿರಲೇಬೇಕು. ಕೇವಲ ಲೈಂಗಿಕ ಭಾಗಗಳಿಗಷ್ಟೇ ಪ್ರಾಧಾನ್ಯತೆ ಕೊಟ್ಟು ರಚಿಸಲಾದ ಈ ಶಿಲ್ಪಗಳು ನಿಗೂಢ ಸಂಕೇತಗಳನ್ನು ಬಿಂಬಿಸುತ್ತದೆ ಎಂದೂ

೦೭. ಡಾ. ಶಿಲಾಕಾಂತ ಪತ್ತಾರ : ಬಾದಾಮಿ, ಸಾಂಸ್ಕೃತಿಕ ಅಧ್ಯಯನ, ಪುಟ- ೧೭೦

ಅರ್ಥೈಯಿಸಬೇಕಾಗುತ್ತದೆ. ಬಹುಶಃ ಜಗತ್ತಿನ ಬೇರಾವುದೇ ಭಾಗದಲ್ಲಿ ಈ ರೀತಿ ಕೇವಲ ಸ್ತ್ರೀಯೋನಿಯನ್ನು ಸ್ತನಗಳನ್ನು ಪುರುಷ ಲಿಂಗಗಳನ್ನು ಬಹಿರಂಗವಾಗಿ ಅಷ್ಟೇ ಕಲಾತ್ಮಕವಾಗಿ ಸುಂದರವಾಗಿ ಇನ್ನೆಲ್ಲಿಯೂ ಇಷ್ಟು ದೊಡ್ಡ ಪ್ರಮಾಣದಲ್ಲಿ ಚಿತ್ರಿಸಿದಂತೆ ಕಂಡು ಬರುವುದಿಲ್ಲ. ಇದು ಈ ಶಿಲ್ಪದ ವೈಶಿಷ್ಟವನ್ನು ಎತ್ತಿ ತೋರಿಸುತ್ತದೆ.

ಅಧ್ಯಾಯ : ಆರು

## ಲಜ್ಜಾಗೌರಿ ಶಿಲ್ಪಗಳ ಕಲಾಕೃತಿ, ಶೈಲಿ, ವಿನ್ಯಾಸ

ಲಜ್ಜಾಗೌರಿ ಶಿಲ್ಪಗಳ ರಚನೆಯ ಹಿನ್ನಲೆ, ಅವುಗಳಲ್ಲಿಯ ಲೈಂಗಿಕ ಅಂಶಗಳು, ಅವುಗಳ ಸ್ವರೂಪ ಇತ್ಯಾದಿಗಳ ಬಗ್ಗೆ ನಡೆದಷ್ಟು, ಚರ್ಚೆ ಸಂಶೋಧನೆಗಳು ಲಜ್ಜಾಗೌರಿ ಶಿಲ್ಪಗಳಲ್ಲಿಯ ಕಲಾತ್ಮಕ ಅಂಶಗಳ ಕುರಿತಾಗಿ ಆಗಿಲ್ಲವೆಂದು ಹೇಳಲೇಬೇಕಾಗುತ್ತದೆ. ಇದಕ್ಕೆ ಮುಖ್ಯ ಕಾರಣ ಇಂದಿನ ಕಾಲದ ಮಡಿವಂತಿಕೆ ಒಂದಾದರೆ ಇನ್ನೊಂದು ಕಾರಣ ಇತಿಹಾಸ ಸಂಶೋಧಕರು, ಕಲಾವಿದರು, ಕಲಾವಿಮರ್ಶಕರು, 'ಲಜ್ಜಾಗೌರಿ' ಶಿಲ್ಪದ ಕಲಾತ್ಮಕ. ಅಂಶಗಳಿಗಿಂತಲೂ ಹೆಚ್ಚಾಗಿ ಅವುಗಳ ತಾಂತ್ರಿಕ ಮತ್ತು ಧಾರ್ಮಿಕ ಹಿನ್ನೆಲೆಗೆ ಮಹತ್ವ ಕೊಟ್ಟಿದ್ದೇ ಆಗಿದೆ. ಶ್ರೀಮತಿ ಸ್ಟೆಲ್ಲಾ ಕ್ರಾಮಿಶ್‌ರವರು ಮಾರ್ಷಲ್, ಕ್ಯಾಂಪ್‌ಬೆಲ್ ಹೀಗೆ ಕೆಲವರು ಶಿಲ್ಪಗಳ ಭಂಗಿ, ಆಕಾರ, ಆಕೃತಿಗಳ ಕುರಿತು ಸ್ವಲ್ಪ ಮಟ್ಟಿಗೆ ಚರ್ಚಿಸಿದ್ದಾರೆ. ಆದರೆ ಒಟ್ಟಾಗಿ ಅವುಗಳಲ್ಲಿಯ. ಕಲಾತ್ಮಕ ಅಂಶಗಳಾಗಲಿ, ವಿನ್ಯಾಸವಾಗಲಿ ಅಥವಾ ಶೈಲಿಗಳ ಕುರಿತಾಗಲಿ ಇಂದು ಅವುಗಳನ್ನು ಗಮಿನಿಸಬೇಕಾದ ಅಗತ್ಯತೆ ತೀವ್ರವಾಗಿದೆ. ಬೇರೆ-ಬೇರೆ ಕಾಲಘಟ್ಟಗಳಲ್ಲಿ ರಚಿತವಾದ 'ಲಜ್ಜಾಗೌರಿ' ಶಿಲ್ಪಗಳು ವಿಭಿನ್ನ ಶೈಲಿಗಳಲ್ಲಿ ರಚಿತವಾಗಿರುವುದನ್ನು ನಾವು ಗಮನಿಸಬಹುದು.

ದೇಶದಾದ್ಯಂತ ದೊರೆತ ಲಜ್ಜಾಗೌರಿ ಶಿಲ್ಪಗಳಲ್ಲಿ ಅತ್ಯಂತ ಸುಂದರವಾಗಿರುವ ಮತ್ತು ಕಲಾತ್ಮಕವಾಗಿರುವ ಶಿಲ್ಪಗಳು ಕರ್ನಾಟಕ ಪ್ರದೇಶದಲ್ಲಿಯೇ ದೊರೆತಿವೆ. ಮಹಾರಾಷ್ಟ್ರ ಪ್ರದೇಶದಲ್ಲಿ



"ಕಮಲ ಶೀರ್ಷಾ ಯೋನಿಸ್ತನ ಮೂರ್ತಿ"
ಝೂಂಸಿ, ಉತ್ತರ ಪ್ರದೇಶ (ಅಲಹಾಬಾದ್ ಮ್ಯೂಸಿಯಂ)



"ಅಲಂಪುರ ಯೋನಿ ಮೂರ್ತಿ ಶಿಲ್ಪ"
ನಾಗರ್ಜುನ ಕೊಂಡ (ಜಿಲ್ಲೆ ಗುಂಟೂರು) ಆಂಧ್ರ ಪ್ರದೇಶ

ಕೆಲವೊಂದು ಲಜ್ಜಾಗೌರಿ ಶಿಲ್ಪಗಳು ದೊರೆತಿವೆಯಾದರೂ ಸೌಂದರ್ಯದ ದೃಷ್ಟಿಯಿಂದ ಮತ್ತು ವಿವರಗಳ ದೃಷ್ಟಿಯಿಂದ ಕೂಡ ಕರ್ನಾಟಕದಲ್ಲಿಯ ಶಿಲ್ಪಗಳು ಮುಖ್ಯವಾಗುತ್ತವೆ. ಮಹಾರಾಷ್ಟ್ರದ ಉಸ್ಮಾನಬಾದ್‌ನ 'ತೇರ' ಎಂಬಲ್ಲಿ ದೊರೆತಿರುವ ಲಜ್ಜಾಗೌರಿ ಶಿಲ್ಪವು ನಾಲ್ಕು ಪಕ್ಕಗಳಲ್ಲಿ ಕಮಲಗಳನ್ನು ಹೊಂದಿದ್ದು ಕಿಬ್ಬೊಟ್ಟೆ ಮತ್ತು ಅದರ ಮೇಲ್ಭಾಗದಲ್ಲಿ ಒರಟಾದ ಮೈವಳಿಕೆಯಿಂದ ಚೌಕಾಕಾರಗಳನ್ನು ಕೆತ್ತಲಾಗಿದೆ. ಇದು ತೀರಾ ಮೊದಮೊಲನೆಯ ಶಿಲ್ಪವಾಗಿದ್ದು ಕಲಾತ್ಮಕತೆಯ ದೃಷ್ಠಿಯಿಂದ ನೋಡಿದಾಗ ಮಹತ್ವದೆನಿಸುವುದಿಲ್ಲವಾದರೂ ನಾಲ್ಕು ಪಕ್ಕಗಳಲ್ಲಿ ಕೆತ್ತಿರುವ ಕಮಲಗಳು ಗಮನ ಸೆಳೆಯುತ್ತವೆ. ತಲೆಯ ಭಾಗವು ವೃತ್ತಾಕಾರವನ್ನು ಹೊಂದಿದೆ. ಇಲ್ಲಿ ಕಲಾವಿದನಿಗೆ ಯೋನಿ ಭಾಗವನ್ನು ಅದಕ್ಕೆ ಪೂರಕವಾಗಿ ಅಗಲಿಸಿದ ತೊಡೆಗಳನ್ನಷ್ಟೇ ತೋರಿಸುವ ಉದ್ದೇಶವಿದ್ದಂತಿದೆ. ಅಂತಹದೇ ಶಿಲ್ಪವು ಅಹಮದ್ ನಗರ ಜಿಲ್ಲೆಯ (ಮಹಾರಾಷ್ಟ್ರ) ನೇವಾಸೆ ಎಂಬಲ್ಲಿ ದೊರೆತಿದೆ. ಈ ಶಿಲ್ಪದಲ್ಲಿ ತೊಡೆಗಳು ಸುಪುಷ್ಟವಾಗಿದ್ದು ಯೋನಿಯು ಸ್ವಲ್ಪ ಮೇಲಕ್ಕೆ ಉಬ್ಬಿದಂತೆ ಕೆತ್ತಲಾಗಿದೆ. ಅದಕ್ಕಿಂತ ಮೇಲ್ಮಟ್ಟದಲ್ಲಿಯ ಭಾಗವನ್ನು ಸ್ತೂಪಾಕಾರದಲ್ಲಿ ಕೆತ್ತಲಾಗಿದ್ದು, ಒರಟಾದ ಮೈವಳಿಕೆಯನ್ನು ಹೊಂದಿದೆ. ನಾಗಾರ್ಜುನ ಕೊಂಡದಲ್ಲಿ ದೊರೆತ ಪ್ರಾಚೀನ ಶಿಲಾ, ಶಿಲ್ಪವು ಕೂಡಾ ವಿಶಿಷ್ಟವಾಗಿದ್ದು ಕಾಲುಗಳಲ್ಲಿ ದಪ್ಪನಾದ ಗೆಜ್ಜೆಗಳನ್ನು ಹೊಂದಿದ್ದು ಯೋನಿ, ಕಿಬ್ಬೊಟ್ಟೆ ಹಾಗು ದೇಹ ಭಾಗವು ಒಂದೇ ಆಗಿದ್ದು, ಅಂಡಾಕಾರದಲ್ಲಿದ್ದು ಹೊಕ್ಕಳಿನಿಂದ ಕೆಳಭಾಗವು ವಿಶಿಷ್ಟ ರೀತಿಯ ಅಲಂಕರಣಗಳನ್ನು ಹೊಂದಿದೆ. ಇವೆಲ್ಲಾ ಪ್ರಾಚೀನ ಕಾಲಕ್ಕೆ ಸೇರಿದ ಶಿಲ್ಪಗಳಾಗಿವೆ. ಶಿಲ್ಪ ರಚನೆಯಲ್ಲಿ ಕೇವಲ ಯೋನಿಭಾಗಕಷ್ಟೆ ಮಹತ್ವ ನೀಡಿದ್ದನ್ನು ನಾವಿಲ್ಲಿ ಗಮನಿಸಬೇಕು.

ಆದರೆ ಕರ್ನಾಟಕ ಭಾಗದಲ್ಲಿ ದೊರೆತ ಶಿಲ್ಪಗಳು ಇವಕ್ಕಿಂತ ತುಂಬಾ ಭಿನ್ನವಾಗಿವೆ. ಎನ್ನಬಹುದು. ಅಲ್ಲದೇ ಈ ಶಿಲ್ಪಗಳು ನಂತರದ ಕಾಲದಲ್ಲಿ ಅಂದರೆ ಸುಮಾರು ಕ್ರಿ.ಶ, ೫-೬ ನೇ ಶತಮಾನದ ನಂತರ ರಚಿತವಾಗಿವೆ ಎಂದು ಹೇಳಬಹುದು. ಹೆಚ್ಚಾಗಿ ಈ ಶಿಲ್ಪಗಳು ಬಾದಾಮಿ ಚಾಲುಕ್ಯರ ಕಾಲದಲ್ಲಿ ರಚಿತವಾಗಿವೆ. ಬಹುಶಃ ಮಹಾಕೂಟ ಮತ್ತು ಐಹೊಳೆಯ ಸಂಗ್ರಹಾಲಯದಲ್ಲಿ ಹೊರ ಭಾಗದಲ್ಲಿ ನಿಲ್ಲಿಸಲ್ಪಟ್ಟಿರುವ ಶಿಲ್ಪಗಳು ಇವುಗಳಲ್ಲಿ ಮೊದಲು ರಚಿತವಾಗಿದೆ ಎಂದು ಎನಿಸುತ್ತವೆ. ಇದನ್ನು ಈ ಶಿಲ್ಪಗಳ ರಚನೆ ಮತ್ತು ಆಕಾರದ ಮೂಲಕ ಹೇಳಬಹುದಾಗಿದೆ. ಇಂತಹ ಶಿಲ್ಪಗಳಲ್ಲಿ ಪ್ರಮುಖವಾದ ಕೆಲವು ಶಿಲ್ಪಗಳ ಕಲಾತ್ಮಕತೆಯನ್ನು ಶೈಲಿಯ ದೃಷ್ಠಿಯಿಂದ ನೋಡೋಣ.

**ಸನ್ನತಿಯಲ್ಲಿ ದೊರೆಕಿರುವ ಶಿಲ್ಪ**

ಮೊದಮೊದಲು 'ಲಜ್ಜಾಗೌರಿ' ಶಿಲ್ಪಗಳು ನಮಗೆ ದೊರಕಿರುವುದು ಗುಲಬರ್ಗಾ ಜಿಲ್ಲೆಯ



ಗುಲಬರ್ಗಾ ಜಿಲ್ಲೆ, ಶಹಾಪೂರ ತಾಲೂಕು, ಸನ್ನತಿಯಲ್ಲಿ ದೊರಕಿರುವ ಟೆರ್ರಾಕೂಟ ಲಜ್ಜಾಗೌರಿ ಶಿಲ್ಪ



ಬಾಗಲಕೋಟ ಜಿಲ್ಲೆ. ಹುನಗುಂದ ತಾಲೂಕು. ಸಿದ್ದನಕೊಳ್ಳದಲ್ಲಿರುವ ಲಜ್ಜಾಗೌರಿ ಶಿಲ್ಪ

ಸನ್ನತಿಯಲ್ಲಿ ಬಹಳ ಸಣ್ಣಗಾತ್ರದ ಮೃತ್ತಿಕಾ ಶಿಲ್ಪಗಳು ದೊರಕಿವೆ. ಈ ಲಜ್ಜಾಗೌರಿ ಶಿಲ್ಪಗಳನ್ನು ಮನೆಯಲ್ಲಿ ಇಟ್ಟುಕೊಂಡ ಪೂಜಾ ಮೂರ್ತಿಗಳಾಗಿದ್ದಿರಬೇಕು.[೧] ಒಂದು ಶಿಲ್ಪವು ಕಾವಿ ಬಣ್ಣಯುಕ್ತವಾಗಿದೆ ಕಾವಿ ಬಣ್ಣ ಹೊಂದಿರುವ ಶಿಲ್ಪವು ತಲೆಯ ಭಾಗವನ್ನು ಕಳೆದುಕೊಂಡಿದೆ. ಸುಂದರವಾಗಿರುವ ಈ ಶಿಲ್ಪದಲ್ಲಿಯೂ ಸೂಕ್ಷ್ಮವಾಗಿ ಗಮನಿಸಿದಾಗ ಪ್ರತಿಯೊಂದು ಭಾಗವನ್ನು ಅತ್ಯಂತ ಕಲಾತ್ಮಕವಾಗಿ ಕೆತ್ತಲಾಗಿದೆ ತೋಳುಗಳಲ್ಲಿ ತೋಳಬಂದಿ, ಮುಂಗೈಗಳಲ್ಲಿ ಬಳೆಗಳನ್ನು ಹೊಂದಿದೆ. ಶಿಲ್ಪಶಾಸ್ತ್ರದ ತಾಳಮಾನವನ್ನು ಇಲ್ಲಿ ನಾವು ಗಮನಿಸಲಾಗದಾದರೂ ಅಂಗಗಳು ಪ್ರಮಾಣಬದ್ಧವಾಗಿವೆ. ದುಂಡಾಗಿರುವ (ದಷ್ಟ-ಪುಷ್ಟ) ವಾಗಿರುವಂತೆ ರಚಿಸಲಾದ ಈ ಶಿಲ್ಪವು ನಗ್ನವಾಗಿಯೇ ಇದೆ.

**ಸಿದ್ದನಕೊಳ್ಳದಲ್ಲಿರುವ ಶಿಲ್ಪ**

ಬಾದಾಮಿ ಸಮೀಪವಾಗಿ ೨೨ಕಿ.ಮೀ ಅಂತರದಲ್ಲಿ ಸಿದ್ದನಕೊಳ್ಳ ಎಂಬ ಹಳ್ಳಿ ಇದೆ. ಅಲ್ಲಿಂದ ಸ್ವಲ್ಪ ಎತ್ತರ ಪ್ರದೇಶದಲ್ಲಿ ಒಂದು ವಿಶಾಲವಾದ ಬಯಲು ಪ್ರದೇಶದಲ್ಲಿ ಒಂದು ನೈಸರ್ಗಿಕವಾದ ಕಲ್ಲಾಸರೆ ಇದೆ. ಅಲ್ಲಿ ಒಂದು ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯವೂ ಇದೆ. ಅದರ ಸಮೀಪದಲ್ಲಿ ನೈಸರ್ಗಿಕ ನೀರಿನ ಝುರಿಯೂ ಇದ್ದು ಪಕ್ಕದಲ್ಲಿ ಗುಹೆಯೂ ಇದೆ. ಪಕ್ಕದಲ್ಲಿ ಬಂಡೆಯ ಮೇಲೆ ಲಜ್ಜಾ ಗೌರಿಯನ್ನು ಕೆತ್ತಲಾಗಿದೆ. ವಿಶಾಲವಾದ ಹಾಸು ಬಂಡೆಯ ಮೇಲೆ ಕೆತ್ತಲಾದ ಈ ಲಜ್ಜಾಗೌರಿಯು ಉಬ್ಬು ಕೆತ್ತನೆಯಾಗಿದೆ.

ಅಗಲವಾದ ಎರಡು ತೊಡೆಗಳನ್ನು ಹರಡಿ ಸಂಭೋಗ ಭಂಗಿಯಲ್ಲಿರುವಂತೆ ಕೆತ್ತಲಾಗಿದೆ. ಒರಟಾದ ಮರಳು ಕಲ್ಲು ಇದಾಗಿದೆ. ಯೋನಿಯನ್ನು ಸ್ಪಷ್ಟವಾಗಿ ಎದ್ದು ಕಾಣುವಂತೆ ಕೆತ್ತಲಾಗಿದೆ. ಸೊಂಟ ಭಾಗದಲ್ಲಿ ಉಡಿದಾರ ಇದೆ. ಸ್ವಲ್ಪ ಮೇಲೆ ಸಣ್ಣದಾದ ಕಮಲದ ಹೂವು ಇದೆ ಅದರ ಪಕ್ಕದಿಂದ ಕಂಠಹಾರದ ಎರಡು ಎಳೆಗಳು, ಎರಡೂ ಪಕ್ಕದಿಂದ ಉಡಿದಾರಕ್ಕೆ ಸೇರಿಸಲ್ಪಟ್ಟಿವೆ. ತೊಡೆಯ ಭಾಗದಲ್ಲಿಯೂ ಐದು ಎಳೆಗಳ ಬಳೆಗಳನ್ನು ಕೆತ್ತಲಾಗಿದೆ. ಕಾಲುಗಳು ಎರಡು ಬದಿ ಚಾಚಿಕೊಂಡಿದ್ದು ಕಾಲಗೆಜ್ಜೆ, ಅಗಲವಾಗಿದೆ. ಅಲ್ಲಿಯೂ ಕಾಲಗೆಜ್ಜೆಯ ವಿನ್ಯಾಸವು ಕೆಳಮುಖಕ್ಕೆ ಬಾಗಿರುವ ಕಮಲದ ದಳಗಳಂತಿವೆ. ಸ್ತನಗಳು ಚಪ್ಪಟೆಯಾಗಿದ್ದು, ಬಹುಶಃ ಕಲ್ಲಿನ ಮಿತಿಯೇ ಇದಕ್ಕೆ ಕಾರಣವಿರಬಹುದು. ತೆಳುವಾದ ಏಕವಸ್ತ್ರದ ತುದಿಗಳು ಬೆನ್ನ ಹಿಂದಿನಿಂದ ಇಳಿಬಿದ್ದ ಎರಡು ಕಡೆಯ ಕಮಲದ ದಂಟುಗಳಿದ್ದು ಮುಂಗೈಗಳಲ್ಲಿ ಬಳೆಗಳು ಆಕರ್ಷಕವಾಗಿವೆ. ತಲೆಯ

೧೧. ಡಾ. ಎಂ. ಚಿದಾನಂದಮೂರ್ತಿ (ಸಂ): ಶಂಭಾ. ಜೋಶಿ ಅಭಿನಂದನ ಗ್ರಂಥ ಅಧ್ಯಯನ. ಪುಟ-೩೮೫ ಡಾ. ಅ. ಸುಂದರವರ ಲೇಖನ/ಉತ್ತರ ಕರ್ನಾಟಕದಲ್ಲಿಯ ಕೆಲವು ಪ್ರಾಚೀನ ತಾಂತ್ರಿಕ ಮೂರ್ತಿಗಳು

ಭಾಗದಲ್ಲಿ ಅರಳಿದ ಕಮಲವಿದ್ದು ದೊಡ್ಡದಾಗಿದೆ. ಕಮಲದ ದಳಗಳು ಸ್ಪಷ್ಟವಾಗಿ ಕೆತ್ತಲಾಗಿದೆ. ತೆಳು ಉಬ್ಬು ಶಿಲ್ಪವಾದರೂ ಮೂರು ಆಯಾಮದ ರೀತಿಯಲ್ಲಿ ತೋರಿಸಲು ಸಾಕಷ್ಟು ಪ್ರಯತ್ನ ಮಾಡಲಾಗಿದೆ. ಕೈಯ ಬೆರಳುಗಳನ್ನು ಮಾತ್ರವಲ್ಲದೆ ಉಗುರುಗಳನ್ನು ಕೆತ್ತಿರುವುದನ್ನು ನಾವಿಲ್ಲಿ ಗಮನಿಸಬಹುದು. ಸುಮಾರು ಕ್ರಿ.ಶ. ೬-೭ನೇ ಶತಮಾನಕ್ಕೆ[೨] ಸೇರಬಹುದಾದ ಈ ಶಿಲ್ಪವು ತಾಂತ್ರಿಕ ಉದ್ದೇಶದಿಂದಲೇ ರಚಿಸಲಾಗಿದ್ದು ಇಲ್ಲಿಯ ಪರಿಸರವು ಇದಕ್ಕೆ ಪೂರಕವಾಗಿದೆ. ಬಹುಶಃ ಇಲ್ಲಿರುವ ದೇವಾಲಯದಲ್ಲಿರುವ ಸಪ್ತ ಮಾತೃಕೆಯ ಶಿಲ್ಪಗಳಿಗೂ ಇದಕ್ಕೂ ಸಂಬಂಧವಿರಲೂಬಹುದು. ಏನೇ ಇದ್ದರೂ ಇಂದು ಈ ಶಿಲ್ಪವು ತೀರಾ ವೈಯಕ್ತಿಕ ನೆಲೆಯಲ್ಲಿ ಮಕ್ಕಳನ್ನು ಬಯಸುವ ಸ್ತ್ರೀಯರು ಖಾಸಗಿಯಾಗಿ ಬಂದು ಆರಾಧಿಸುವ ಶಿಲ್ಪವಾಗಿ ಉಳಿದುಕೊಂಡಿದೆ. ಶಿಲ್ಪಕಲೆಯ ಅಧ್ಯಯನ ನಡೆಸಲು ಈ ಶಿಲ್ಪವು ಒಂದು ಉತ್ತಮ ಆಕರವಾಗಿದೆ.

**ಬಾದಾಮಿ ವಸ್ತು ಸಂಗ್ರಹಾಲಯದಲ್ಲಿರುವ ಶಿಲ್ಪ**

ಇದು ಬಾದಾಮಿ ಸಮೀಪದ ನಾಗರಾಳದ ನಾಗನಾಥ ದೇವಾಲಯದ ಸಮೀಪದ ಕೆರೆಯ ದುರಸ್ತಿಯ ಸಂದರ್ಭದಲ್ಲಿ ದೊರಕಿದ ಶಿಲ್ಪವಾಗಿದೆ. ಈ ಶಿಲ್ಪವು ಅಧ್ಯಯನದ ದೃಷ್ಟಿಯಿಂದ ಯೋಗ್ಯವಾದ ಒಂದು ಉತ್ತಮ ಶಿಲ್ಪವಾಗಿದೆ. ಇಂದು ಬಾದಾಮಿಯ ವಸ್ತು ಸಂಗ್ರಹಾಲಯದಲ್ಲಿ ಉತ್ತಮ ರೀತಿಯಲ್ಲಿ ಸಂಗ್ರಹಿಸಿಡಲಾಗಿದೆ. ಸುಮಾರು ಕ್ರಿ.ಶ. ೬೫೦ ಸುಮಾರಿನಲ್ಲಿ ರಚಿಸಲ್ಪಟ್ಟಿದೆ. ಎಂದು ಹೇಳಲಾಗುವುದು. ಈ ಶಿಲ್ಪವು ಸುಮಾರು ೩ಅಡಿ ಎತ್ತರವಿದೆ. ಶಯನ ಭಂಗಿಯಲ್ಲಿರುವ ಶಿಲ್ಪ ಲಜ್ಜಾಗೌರಿಯು ತನ್ನ ಎರಡು ತೊಡೆಗಳನ್ನು ಮೇಲ್ಕೆತ್ತಿ ಮೊಣಕಾಲುಗಳನ್ನು ಮಡಚಿ ಹರಡಿಕೊಂಡಿದ್ದಾಳೆ. ಉಬ್ಬಿದ ಯೋನಿ, ಸೊಂಟದಲ್ಲಿ ದಪ್ಪನಾದ ಉಡಿದಾರ ಕಾಲುಗಳಲ್ಲಿ ದಪ್ಪನಾದ ಕಾಲ್ಗಡಗಗಳನ್ನು ಹೊಂದಿರುವ ಈ ಶಿಲ್ಪದಲ್ಲಿಯೂ ತೊಡೆಗಳಲ್ಲಿ ಬಿಗಿಯಾದ ಬಳೆಗಳನ್ನು ತೊಟ್ಟುಕೊಂಡಿದಾಳೆ ಕಾಲುಗಳನ್ನು ಎತ್ತಿರುವದರಿಂದ ಹೊಟ್ಟೆಯ ಮಾಂಸಖಂಡಗಳು ಒತ್ತಿದಂತ್ತಾಗಿರುವುದರಿಂದ ಕುಂಭದ ಆಕಾರವನ್ನು ಪಡೆದುಕೊಂಡಿದೆ. ಕುತ್ತಿಗೆಯಲ್ಲಿ ಆಕರ್ಷಕವಾದ ಚಕ್ರಸರ ಮಾಲೆಗಳನ್ನು ಧರಿಸಿದ್ದು, ಸ್ತನಗಳ ಮಧ್ಯದಿಂದ ಇಳಿಬಿದ್ದ ಎರಡು ಕಡೆ ವಿಸ್ತಿರಿಸಿದೆ. ಸ್ತನಗಳು ದುಂಡಾಗಿದ್ದು, ಪೂರ್ಣ ವೃತ್ತಾಕಾರದಲ್ಲಿರುವದಲ್ಲದೆ ಮೇಲೆ ತೊಟ್ಟುಗಳನ್ನು ಕೂಡಾ ಆಕರ್ಷಕವಾಗಿ ಕೆತ್ತಲಾಗಿದೆ.

ಎರಡು ಕೈಗಳನ್ನು ಎರಡು ಪಕ್ಕಗಳಲ್ಲಿ ಮೇಲಕ್ಕೇತ್ತಲಾಗಿದ್ದು, ಎರಡು ಕೈಗಳಲ್ಲಿ ಅರಳಿದ

೦೨. ಡಾ. ಎಂ. ಚಿದಾನಂದಮೂರ್ತಿ (ಸಂ): ಶಂಭಾ. ಜೋಶಿ ಅಭಿನಂದನ ಗ್ರಂಥ ಅಧ್ಯಯುನ. ಪುಟ-೩೮೮ ಡಾ. ಅ. ಸುಂದರವರ ಲೇಖನ/ಉತ್ತರ ಕರ್ನಾಟಕದಲ್ಲಿಯ ಕೆಲವು ಪ್ರಾಚೀನ ತಾಂತ್ರಿಕ ಮೂರ್ತಿಗಳು



ಬಾಗಲಕೋಟ ಜಿಲ್ಲೆ, ಬಾದಾಮಿ ವಸ್ತು ಸಂಗ್ರಹಾಲಯದಲ್ಲಿರುವ ಲಜ್ಜಾಗೌರಿ ಶಿಲ್ಪ

ಕಮಲಗಳನ್ನು ಕೆತ್ತಲಾಗಿದೆ. ಕೈಗಳ ಬೆರಳುಗಳು ಕ್ರಿಯಾತ್ಮಕವಾಗಿದ್ದು ಕೋಮಲವಾಗಿವೆ. ಜೀವಂತಿಕೆಯಿಂದ ತುಂಬಿ ತುಳುಕುತ್ತಿರುವ ಕೈಗಳಲ್ಲಿ, ಅರಳಿದ ಕಮಲಗಳಿದ್ದು ಸೂರ್ಯನಡೆಗೆ ಮುಖಮಾಡಿದಂತಿವೆ. ಒಂದು ಸುತ್ತು ದಳಗಳು ಸಮನಾಂತರವಾಗಿದ್ದು, ಮತ್ತೊಂದು ಸುತ್ತಿನ ದಳಗಳು ಈಗಷ್ಟೆ ಅರಳುತ್ತಿರುವಂತಿದ್ದು, ಮೇಲ್ಮುಖವಾಗಿವೆ. ತಲೆಯ ಭಾಗದಲ್ಲಿ ದೊಡ್ಡದೊಂದು ಅರಳಿದ ಕಮಲವು ದಳಗಳನ್ನು ಪ್ರತಿನಿಧಿಸುವಂತಿರುವ ಈ ಕಮಲದಲ್ಲಿ ದಳಗಳು ಹಲವಾರು ಸುತ್ತುಗಳಲ್ಲಿ ಹರಡಿಕೊಂಡಿದ್ದು, ಆಕರ್ಷಕವಾಗಿರುವುದಲ್ಲದೆ. ಕಲಾತ್ಮಕತೆಯಿಂದ ತುಂಬಿ ತುಳುಕವಂತಿದೆ. ತೋಳುಗಳಲ್ಲಿ ಅಗಲವಾದ ತೋಳು ಬಂದವು ಸುತ್ತಿಕೊಂಡಿದ್ದು ಅಲಂಕಾರಿಕವಾಗಿದೆ. ಒಟ್ಟು ಶಿಲ್ಪದಲ್ಲಿ ಸೊಂಟದಿಂದ ಕುತ್ತಿಗೆಯವರೆಗಿನ ಭಾಗವು ಸೊಂಟದಿಂದ ಕೆಳಗಿನ ಭಾಗವನ್ನು ಗಮನಿಸಿದರೆ ಸ್ವಲ್ಪ ಉದ್ದವಾಗಿದೆ. ಈ ಶಿಲ್ಪವು ಬಾದಾಮಿ ಚಾಲುಕ್ಯರ ಕಾಲಕ್ಕೆ ಸೇರಿದ್ದಾಗಿದ್ದು, ಅತ್ಯಂತ ಸುಂದರವಾದ ಶಿಲ್ಪಗಳಲ್ಲಿ ಒಂದಾಗಿದೆ. ಇದೇ ಕಾಲಕ್ಕೆ ಸೇರಿದ ಇಂತಹದೇ ಶಿಲ್ಪವೊಂದು ಆಂದ್ರಪ್ರದೇಶದ ಕರ್ನೂಲ ಜಿಲ್ಲೆಯ ಕುಡುವೆಲ್ಲಿಯ ಸಂಗಮೇಶ್ವರ ದೇವಾಲಯ ಸಮುಚ್ಛಯದಲ್ಲಿದ್ದು ಬಾದಾಮಿಯಲ್ಲಿರುವ ಶಿಲ್ಪಗಳನ್ನು ಹೋಲುತ್ತದೆ. ಆದರೆ ಕಾಲದ ತುಳಿತಕ್ಕೆ ಸಿಕ್ಕಿ ಹಾಳಾಗಿರುವ ಈ ಶಿಲ್ಪದ ಕಮಲಗಳು ಕುತ್ತಿಗೆಯ ಕಂಠಹಾರಗಳು ಸ್ವಲ್ಪಮಟ್ಟಿಗೆ ಕಡಿಮೆ ಕುಸುರಿ ಕೆಲಸವನ್ನು ಹೊಂದಿದೆ. ಆದರೂ ತುಲನಾತ್ಮಕವಾಗಿ ನೋಡಿದರೆ ಬಾದಾಮಿಯ ಶಿಲ್ಪವನ್ನು ಹೋಲುತ್ತದೆ.

**ಬಾಗಲಕೋಟೆಯ ವಸ್ತು ಸಂಗ್ರಹಾಲಯದಲ್ಲಿರುವ ಶಿಲ್ಪ**

ಬಾಗಲಕೋಟೆಯ ನವನಗರದ ವಸ್ತು ಸಂಗ್ರಹಾಲಯದಲ್ಲಿ ಇತ್ತಿಚೇಗೆ ಸಂಗ್ರಹಿಸಿಲಾದ ಲಜ್ಜಾಗೌರಿ ಶಿಲ್ಪವೊಂದಿದೆ. ಸುಮಾರು ೧೦-೧೧ನೇ ಶತಮಾನ, ಗುಡಿಜಾಪೂರ ಕೆರೆಯೊಂದರಲ್ಲಿ ದೊರಕಿರುವ ಈ ಶಿಲ್ಪದ ತಲೆಯ ಭಾಗವು ತುಂಡರಿಸಲಾಗಿದೆ. ಮುಕ್ಕಾಲು ಭಾಗ ಕೆತ್ತದೆ. ಉಬ್ಬು ಶಿಲ್ಪವಾಗಿರುವ ಇದು ಸುಮಾರಾಗಿ ತ್ರಿಮಾನವನ್ನೇ ಹೊಂದಿದೆ. ಮರಳು ಕಲ್ಲಿನಲ್ಲಿ ಕೆತ್ತಲಾಗಿರುವ ಈ ಶಿಲ್ಪವು ಪೂರ್ಣವಾಗಿ ಕುಳಿತ ಭಂಗಿಯಲ್ಲಿದೆ. ಇದು ಗಮನಿಸಬೇಕಾದ ವಿಚಾರ ಬಾದಾಮಿ ಚಾಲುಕ್ಯರ ಕಾಲದ ಶಿಲ್ಪಗಳ ಗುಣಗಳಲ್ಲಿ ಕೆತ್ತಿದ ರೀತಿಯಲ್ಲಿಯೇ ಕೆತ್ತಲಾದ ಈ ಶಿಲ್ಪವು ಸರಳತೆಗೆ ಒಂದು ಉದಾಹರಣೆಯಾಗಿದೆ. ಮುಂಗೈಯಲ್ಲಿ ಒಂದು ಬಳಿ, ಕಾಲಲ್ಲಿ ಸರಳವಾದ ಕಾಲ್ಗಡಗವಿದೆ. ತೋಳುಬಂಧಿಯಾಗಲಿ ಕಂಠಹಾರವಾಗಲಿ ಇಲ್ಲ ಕೈಗಳೆರಡನ್ನು ಕೆಳಗಡೆ ಒಯ್ದು ಯೋನಿಯನ್ನು ಅಗಲಿಸಿ ತೋರಿಸುವಂತಿದೆ. ಸಾಮಾನ್ಯ ಬಾಷೆಯಲ್ಲಿ ನಾವು ಅಶ್ಲೀಲವೆಂದು ಹೇಳಬಹುದಾದ ರೀತಿಯಲ್ಲಿರುವ ಈ ಶಿಲ್ಪದ ಕೈಯಲ್ಲಿ ಕಮಲಗಳಿಲ್ಲ ಇದು ಗಮನಾರ್ಹವಾಗಿದೆ. ಕರ್ನಾಟಕದ ಉಳಿದೆಡೆಯಲ್ಲೂ ಆ ಕಾಲಮಾನ (ಕ್ರಿ.ಶ.೬-೧೧ನೇ









ವಸ್ತು ಸಂಗ್ರಹಾಲಯ ನವನಗರ, ಬಾಗಲಕೋಟ







ಮಹಾಕೂಟದ ಪರಿಸರ, ಬಾದಾಮಿ ತಾಲೂಕು

ಬಾಗಲಕೋಟೆಯ ಜಾನಪದ ವಸ್ತು ಸಂಗ್ರಹಾಲಯದಲ್ಲಿರುವ ಲಜ್ಜಾಗೌರಿ ಶಿಲ್ಪ



ಬಾಗಲಕೋಟ ಜಿಲ್ಲೆ, ಬಾದಾಮಿ ತಾಲೂಕು, ಮಹಾಕೂಟದಲ್ಲಿರುವ ಲಜ್ಜಾಗೌರಿ ಶಿಲ್ಪ

ಶತಮಾನ) ಮತ್ತೆಲ್ಲಿಯೂ ನಮಗೆ ಈ ರೀತಿಯ ಲಜ್ಜಾಗೌರಿ ದೊರೆತ ನಿದರ್ಶನವಿಲ್ಲ.

**ಮಹಾಕೂಟದಲ್ಲಿರುವ ಶಿಲ್ಪ**

ಇಂದಿನ ಹೊಸ ಮಹಾಕೂಟದ ಕೆರೆಯ ದಂಡೆಯಲ್ಲಿ ಅನಾಥವಾಗಿ ಇರಿಸಲಾಗಿರುವ ಈ ಶಿಲ್ಪವು ಛಿದ್ರವಾಗಿದ್ದು ಮೇಲ್ಭಾಗವಷ್ಟೇ ಉಳಿದುಕೊಂಡಿದೆ. ಅಳಿದುಳಿದಿರುವ ಈ ಶಿಲ್ಪವನ್ನು ಗಮನಿಸಿದರೆ ಈ ಶಿಲ್ಪವೂ ಬಾದಾಮಿ ಶಿಲ್ಪದ ರೀತಿಯಲ್ಲೇ ಕೆತ್ತಲಾಗಿದೆ ಮಾತ್ರವಲ್ಲದೆ ಸಾಕಷ್ಟು ಸಾಮ್ಯತೆಯನ್ನು ಹೊಂದಿದೆ. ಬಹುಶಃ ಎರಡು ಶಿಲ್ಪಗಳನ್ನು ಒಬ್ಬನೇ ಶಿಲ್ಪಿ ಕೆತ್ತಿರುವ ಸಾಧ್ಯತೆ ಇದೆ. ಕೈಗಳನ್ನು ಹಿಡಿದ ತಾವರೆ ದಂಟನ್ನು ಮತ್ತು ಶಿರೋಭಾಗವನ್ನು ಗಮನಿಸಿದರೆ ಇದು ಮನದಟ್ಟಾಗುತ್ತದೆ.

**ಹುಲಿಗೆಮ್ಮನ ಕೊಳ್ಳದಲ್ಲಿರುವ ಶಿಲ್ಪ**

ಹುಲಿಗೆಮ್ಮನ ಕೊಳ್ಳವು ಬಾದಾಮಿಯಿಂದ ಸುಮಾರ ೨೨ಕಿ.ಮೀ ಅಂತರದಲ್ಲಿರುವ ಒಂದು ಹಳ್ಳಿ, ಜಾಲಿಹಾಳ ಗ್ರಾಮದಿಂದ ಸುಮಾರು ೧ಕಿ.ಮಿ. ದೂರದಲ್ಲಿ ಕಡಿದಾದ ಒಂದುಕೊಳ್ಳವಿದೆ. ಇಲ್ಲಿ ಒಂದು ನೀರಿನ ಝರಿಯು ಇದ್ದು ಪ್ರಾಚೀನ ಕಾಲದ ಕಲ್ಲಾಸರೆ ಇದೆ. ಅಪರೂಪದ ಒಂದು ಕೊಳ್ಳವಾಗಿರುವ ಇದನ್ನು 'ಹುಲಿಗೆಮ್ಮನಕೊಳ್ಳ' ಎಂದು ಕರೆಯುತ್ತಾರೆ. ಕೊಳ್ಳದ ಮೂಲದಲ್ಲಿ ಒಂದು ವಿಶಾಲವಾದ ಗವಿಯು ಇದೆ.[೩] ಇಲ್ಲಿ ಎರಡು ಲಜ್ಜಾಗೌರಿ ಶಿಲ್ಪಗಳು ಇದ್ದು ಬಹುಶಃ ಸಮೀಪದ ಬೇರೆಡೆಯಿಂದ ತಂದು ಇರಿಸಿರಬಹುದಾದ ಸಾಧ್ಯತೆ ಇದೆ. ಸಪ್ತ ಮಾತೃಕೆಯರು, ಉಮಾಮಹೇಶ್ವರ, ಇತ್ಯಾಧಿ ದೇವತೆಗಳಿರುವ ಇಲ್ಲಿ ತಾಂತ್ರಿಕ ಸಾಧನೆಗೆ ಪ್ರಶಸ್ತವಾದ ಜಾಗ ಇದೆ.

ಇಲ್ಲಿರುವ ಲಜ್ಜಾಗೌರಿ ಶಿಲ್ಪಗಳು ಆಕಾರದಲ್ಲಿ ಸಣ್ಣದಾಗಿವೆಯಲ್ಲದೆ. ಚಪ್ಪಟೆಯಾಗಿವೆ. ಕಲ್ಲಿನ ಚಪ್ಪಡಿಗಳಲ್ಲಿ ಕೆತ್ತಲಾಗಿರುವ ಈ ಶಿಲ್ಪಗಳಲ್ಲಿ ಒಂದರ ಶಿರೋಭಾಗದಲ್ಲಿ ಕಮಲವು ಮೂರು ವೃತ್ತಗಳನ್ನು ಹೊಂದಿದ್ದು, ಸಂಪೂರ್ಣ ವೃತ್ತಾಕಾರವಾಗಿದೆ. (ಸೊಂಟದ ಕೆಳಭಾಗಕ್ಕಿಂತ) ಮೇಲ್ಭಾಗವು ಹೆಚ್ಚು ಉದ್ದವಾಗಿದ್ದು ಸ್ತನಗಳು ಸಣ್ಣದಾಗಿದ್ದರೂ ವೃತ್ತಾಕರವಾಗಿದೆ. ಶಿಲ್ಪವು ಸರಳವಾಗಿದ್ದು, ಯಾವುದೇ ಅಲಂಕರಣಗಳನ್ನು ಹೊಂದಿದಂತೆ ಕಂಡು ಬರುವದಿಲ್ಲ. ತೊಡೆಗಳನ್ನು

---

೦೩. ಡಾ. ಎಂ. ಚಿದಾನಂದಮೂರ್ತಿ (ಸಂ): ಶಂಭಾ. ಜೋಶಿ ಅಭಿನಂದನ ಗ್ರಂಥ ಅಧ್ಯಯನ. ಪುಟ-೩೮೭ ಡಾ. ಅ. ಸುಂದರವರ ಲೇಖನ/ಉತ್ತರ ಕರ್ನಾಟಕದಲ್ಲಿಯ ಕೆಲವು ಪ್ರಾಚೀನ ತಾಂತ್ರಿಕ ಮೂರ್ತಿಗಳು



ಬಾಗಲಕೋಟ ಜಿಲ್ಲೆ, ಬಾದಾಮಿ ತಾಲೂಕು, ಹುಲಿಗೆಮ್ಮನ ಕೊಳ್ಳದಲ್ಲಿರುವ ಲಜ್ಜಾಗೌರಿ ಶಿಲ್ಪ



ಬಾಗಲಕೋಟ ಜಿಲ್ಲೆ, ಬಾದಾಮಿ ತಾಲೂಕು, ಹುಲಿಗೆಮ್ಮನ ಕೊಳ್ಳದಲ್ಲಿರುವ ಲಜ್ಜಾಗೌರಿ ಶಿಲ್ಪ

ಅಗಲಿಸಿ ಕುಳಿತ ಭಂಗಿಯಲ್ಲಿರುವ ಈ ಶಿಲ್ಪವು ಕುಳಿತ ರೀತಿಯಲ್ಲಿ ಇದೆ, ಬಾಗಲಕೋಟೆಯ ಶಿಲ್ಪವನ್ನು ಹೋಲುತ್ತದೆ. ಈ ಶಿಲ್ಪಕ್ಕೆ ಸುಣ್ಣ ಲೇಪನ ಮಾಡಿರುವದಲ್ಲದೇ ಕಾಲದ ಹೊಡತಕ್ಕೆ ಸಿಕ್ಕಿ ಮೇಲ್ಪದರಗಳು ಸವೆದಿವೆ.

ಇನ್ನೊಂದು ಶಿಲ್ಪವು ತಲೆಯ ಭಾಗದಲ್ಲಿ ಕಮಲದ ಮೂರು ವೃತ್ತಗಳನ್ನು ಹೊಂದಿದ್ದು ಫೇಟಾ ಧರಿಸಿದಂತೆ ಅನುಭವವಾಗುತ್ತದೆ. ಕೈಗಳು ಮೊದಲ ಶಿಲ್ಪದಂತೆ ಎರಡು ಕಡೆ ಕಮಲಗಳನ್ನು ಹಿಡಿದಿವೆ. ಸ್ತನಗಳು ದುಂಡಾಗಿಲ್ಲದೆ. ಒರಟಾಗಿ ರಚಿಸಲಾಗಿದ್ದು, ಅಂಗಪ್ರಮಾಣವನ್ನು ಹೋಲುವುದಿಲ್ಲ, ಮಾತ್ರವಲ್ಲದೆ ಕೋಮಲವಾಗಿಲ್ಲ. ತೊಡೆಗಳಲ್ಲಿ ಒಂದನ್ನು ಎಡ ತೊಡೆಯನ್ನು ಮುಂಗಾಲು ನೆಲಕ್ಕೆ ಊರಿಕೊಂಡು ಕೆತ್ತಲಾಗಿದ್ದರೆ ಬಲ ತೊಡೆಯ ಅಗಲಿಸಲ್ಪಟ್ಟಿದೆ. ಹೊಟ್ಟೆಯ ಭಾಗವು ಕುಂಭಾಕಾರವನ್ನು ಹೊಂದಿದೆ. ಈ ಶಿಲ್ಪವು ಶಿಲ್ಪ ಶಾಸ್ತ್ರದ ಅಂಗ ಪ್ರಮಾಣ ರೀತಿಯಲ್ಲಿಯೂ ಇಲ್ಲವೆ ಸರಳವಾಗಿ ಕೇವಲ ಲಕ್ಷಣಿಕ ಉದ್ದೇಶಕ್ಕೆ ರಚಿಸಲ್ಪಟ್ಟಿದ್ದಿರಬೇಕು. ಇಂದು ಈ ಎರಡು ಶಿಲ್ಪಗಳು ಈ ಗುಹೆಯ ಮುಂಭಾಗದಲ್ಲಿ ಅನಾಥವಾಗಿ ಬಿದ್ದಿವೆ. ಕಲಾತ್ಮಕವಾಗಿ ಅಷ್ಟೇನು ಗಮನಾರ್ಹವಲ್ಲದ ಈ ಶಿಲ್ಪಗಳಲ್ಲಿ ಮೊದಲನೆಯ ಶಿಲ್ಪವು ಆಕರ್ಷಣೀಯವಾಗಿದೆ. ತಮ್ಮ ಆಕಾರದ ಮತ್ತು ಶೈಲಿಗಳಿಂದಾಗಿ ಇವು ನಾಗರಾಳದ ಶಿಲ್ಪಗಳಿಗಿಂತ ಮೊದಲು ರಚಿತವಾಗಿರಬಹುದೆನಿಸುತ್ತದೆ.

**ಬೀಳಗಿಯಲ್ಲಿರುವ ಶಿಲ್ಪ**

ಬೀಳಗಿಯ ಶ್ರೀ ಸಿದ್ದೇಶ್ವರ ದೇವಸ್ಥಾನದ ಆವರಣದಲ್ಲಿ ಒಂದು ಲಜ್ಜಾಗೌರಿಯ ಶಿಲ್ಪವು ಇಲ್ಲಿ ವಿಶ್ಲೇಷಿಸಬಹುದಾದ ಒಂದು ಪ್ರಮುಖ ಶಿಲ್ಪ. ಇಂದು ಈ ಶಿಲ್ಪವು ಆರಾಧಕರಿಂದ ಎಣ್ಣೆ ಹಚ್ಚಿಸಿಕೊಂಡು ಮಧ್ಯಭಾಗದ ಗುರುತು ಮಾಸಿದೆಯಾದರೂ ಈ ಶಿಲ್ಪವು ಅತ್ಯಂತ ಮಹತ್ವವಾದುದೆನ್ನಬೇಕು. ಈ ಶಿಲ್ಪದ ಎರಡು ಕಾಲುಗಳು ತೊಡೆಯಿಂದ ಸಂಪೂರ್ಣವಾಗಿ ಎರಡು ಪಕ್ಕಗಳಲ್ಲಿ ಚಾಚಿಕೊಂಡಿದೆ. ಪಾದಗಳು, ಮುಂಗಾಲು ಎದೆ ಮಟ್ಟಕ್ಕೆ ಸಮಾನಾಂತರವಾಗಿ ಚಾಚಿಕೊಂಡಿದೆ. ಕೈಯಲ್ಲಿಯ ಐದು ಬೆರಳುಗಳನ್ನು ಸ್ಪಷ್ಟವಾಗಿ ಬಿಡಿಸಿಟ್ಟಂತೆ ಕೆತ್ತಲ್ಪಟ್ಟಿರುವುದನ್ನು ಗಮನಿಸಿದರೆ ಇದು ಸಂಭೋಗ ಭಂಗಿಯಲ್ಲಿ ಚಾಚಿಕೊಂಡಿದೆ ಎನ್ನಬಹುದು. ತಲೆಯ ಭಾಗದ ಕಮಲವು ಪೂರ್ಣ ವೃತ್ತಕಾರದಲ್ಲಿ ಪ್ರಭಾವಳಿಯಂತೆ ಕೆತ್ತಲ್ಪಟ್ಟಿದೆ. ದಳಗಳು ಸ್ಪಷ್ಟವಾಗಿ ಕೆತ್ತಲಾಗಿದ್ದು. ಕಡಿಮೆ. ಎಸಳುಗಳನ್ನು ಹೊಂದಿದೆ. ಎಡ, ಬಲ, ಅಂಗೈಗಳಲ್ಲಿ ಮಂಡಲಾಕಾರದಂತೆ ಕೆತ್ತಲಾಗಿದೆ. ಯೋನಿಯನ್ನು ಅಗಲವಾಗಿ ತೋರಿಸಿದಂತೆ ತೊಡೆಗಳು ಚಾಚಿಕೊಂಡಿರುವುದು ಗಮನಾರ್ಹ. ಸಣ್ಣ ಗಾತ್ರದ ಸ್ತನಗಳನ್ನು ಹೊಂದಿರುವ ಈ ಶಿಲ್ಪದ ಕುತ್ತಿಗೆಯಲ್ಲಿ ಸರವಿದ್ದು ದೊಡ್ಡದೊಂದು



ಬಾಗಲಕೋಟ ಜಿಲ್ಲೆ, ಬೀಳಗಿ ಸಿದ್ದೇಶ್ವರ ದೇವಾಲಯದ ಆವರಣದಲ್ಲಿರುವ ಲಜ್ಜಾಗೌರಿ ಶಿಲ್ಪ

ಪದಕವಿದೆ. ಈ ಶಿಲ್ಪವು ಮಿತವಾದ ಆಭರಣಗಳನ್ನು ಹೊಂದಿದ್ದು ಮುಂಗೈಯಲ್ಲಿ ಬಳೆಗಳ ಜೊತೆಗೆ ರುದ್ರಾಕ್ಷಿಯ ಒಂದು ಸುತ್ತಿನ ಬಳೆ ಇದ್ದು, ಮತ್ತು ತೋಳ ಬಂದಿಯಲ್ಲಿ ರುದ್ರಾಕ್ಷಿಯ ಒಂದು ಸುತ್ತಿನ ಸರವಿದ್ದು ಕಾಲ್ಗಡದ ಬದಲಾಗಿ ಅಲ್ಲಿಯೂ ರುದ್ರಾಕ್ಷಿಯ ಸರವಿದೆ. ಉಳಿದಡೆ ಇವು ಕಂಡು ಬರುವುದಿಲ್ಲ. ತೊಡೆ ಮತ್ತು ತೋಳುಗಳು ದಷ್ಟ-ಪುಷ್ಟವಾಗಿವೆ. ಸೊಂಟದ ಭಾಗವು ಸಪೂರವಾಗಿದ್ದು, ಮೇಲಕ್ಕೆರಿದಂತೆ ಅಗಲವಾಗಿದೆ. ಬೇರೆಡೆಯ ಶಿಲ್ಪಗಳಿಗಿಂತ ವಿಭಿನ್ನವಾಗಿರುವ ಈ ಶಿಲ್ಪವು ದೇವಾಲಯದ ಆವರಣದ ಹಿಂದೆಯೇ ಇದ್ದು ಆಸ್ತಿಕ ಜನರಿಂದ ಪೂಜಿಸಲ್ಪಡುತ್ತಿದ್ದೆ.

ಇವೆಲ್ಲಾ ನಾವು ನೋಡುವ ಲಜ್ಜಾಗೌರಿಯ ಶಿಲ್ಪಗಳಲ್ಲಿ ಕಂಡು ಬರುವ ಸಾಮಾನ್ಯ ಅಂಶಗಳಾದರೆ, ಈ ಶಿಲ್ಪಗಳನ್ನು ನಾವು ವಿಶೇಷ ರೀತಿಯಿಂದ ಗಮನಿಸಿದರೆ ಸಾಂಪ್ರದಾಯಿಕ ಮತ್ತು ಜನಪದ ನೆಲೆಯಲ್ಲಿ ಈ ಶಿಲ್ಪಗಳನ್ನು ಗುರುತಿಸಬಹುದಾಗಿದೆ. ಎಲ್ಲ ಶಿಲ್ಪಗಳೂ ಮೊದಲೇ ವಿವಿರಿಸಿದಂತೆ ಸಾಮಾನ್ಯ ಅಂಶಗಳನ್ನು ಹೊಂದಿದ್ದರೂ ಕೆತ್ತನೆಯ ದೃಷ್ಠಿಯಿಂದ ಈ ಕಲಾತ್ಮಕತೆಯ ದೃಷ್ಠಿಯಿಂದ ಪ್ರತ್ಯೇಕವಾದ ಶೈಲಿಗಳೆಂದು ಗುರುತಿಸುವುದು ಸಾಧ್ಯವಾಗುತ್ತದೆ.

**ಬಳ್ಳಿಗಾವಿಯಲ್ಲಿರುವ ಶಿಲ್ಪ**

ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲೂಕಿನ ಬಳ್ಳಿಗಾವಿಯ ಶಿಲ್ಪವನ್ನು "ಕಮಲಮ್ಮ" ದೇವತೆಯೆಂದು ರೂಢಿಯಲ್ಲಿ ಹೇಳುತ್ತಾರೆ. ಸನ್ನತಿಯಲ್ಲಿ ದೊರೆತ ಮೂರು ಸಣ್ಣ ಮೂರ್ತಿಗಳು ಸುಟ್ಟ ಮಣ್ಣಿನವು ಉಳಿದೆಲ್ಲವೂ ಕಲ್ಲಿನದಾಗಿದ್ದು ದೊಡ್ಡ ಪ್ರಮಾಣದಲ್ಲಿವೆ. ಕಲ್ಲಿನ ಮೂರ್ತಿಗಳಲ್ಲಿ ನಾಗರಾಳ ಮತ್ತು ಬಳ್ಳಿಗಾವಿಯದು ಕರಿಕಲ್ಲಿನದು, ಉಳಿದವು ನಸುಗೆಂಪು, ಮರಳು ಕಲ್ಲಿನವು ಸಿದ್ದನಕಲ್ಲಿನದು ಮಾತ್ರ ಗವಿಯೊಳಗೆ ನೆಲದ ಹಾಸು ಬಂಡೆಯ ಮೇಲೆ ಕೆತ್ತಲಾಗಿದೆ.

**ಮಜತಿಯಲ್ಲಿರುವ ಶಿಲ್ಪ**

ಬೆಳಗಾವಿ ಜಿಲ್ಲೆ, ಹುಕ್ಕೇರಿ ತಾಲೂಕು ಮಜತಿಯ ಶಿಲ್ಪವು (೧೩ ಸೆಂ.ಮೀ. ಚಚ್ಚೌಕ) ಹೆಚ್ಚು ಅರ್ಥವತ್ತಾಗಿದೆ. ರೇಖಾ ಚಿತ್ರಿತ ಹೊಟ್ಟೆಯ ಭಾಗವು ಮಧ್ಯದ ಭಾಗದಲ್ಲಿ ಉಬ್ಬಿದ್ದು ಮೇಲಿನ ಭಾಗ ಒಡೆದದ್ದು ಕಾಣುವ ಹಾಗೆ ಸಣ್ಣದಾಗಿರುವುದರಿಂದ ಕಲಶ (ಪೂರ್ಣಘಟ)ದ ಹಾಗೆ ಕಾಣುತ್ತದೆ ನಾಗಾರ್ಜುನ ಕೊಂಡದಲ್ಲಿ ದೊರೆತ ಶಿಲ್ಪದಲ್ಲಿ ಹೊಟ್ಟೆಯ ಭಾಗ ಮಣಿಹಾರಗಳಿಂದ ಅಲಂಕೃತವಾದ ಕೇಶವೇ ಆಗಿದ್ದು ಇದನ್ನು ನೆನಪಿಗೆ ತರುತ್ತದೆ. ಮೇಲಿನ ಹಂತದಲ್ಲಿ ಎಡದಿಂದ ಬಲಕ್ಕೆ ಶಿವಲಿಂಗ (ಜೋಡಿ) ಸಿಂಹಮುಖ ಶಂಖ ಸಾಲಾಗಿ ಇವೆ.



ಶಿವಮೊಗ್ಗ ಜಿಲ್ಲೆ, ಶಿಕಾರಿಪೂರ ತಾಲೂಕು,
ಬಳ್ಳಿಗಾವಿಯಲ್ಲಿರುವ ಲಜ್ಜಾಗೌರಿ ಶಿಲ್ಪ

ಬೆಳಗಾವಿ ಜಿಲ್ಲೆ, ಹುಕ್ಕೇರಿ ತಾಲೂಕು, ಮಜತಿಯಲ್ಲಿರುವ ಲಜ್ಜಾಗೌರಿ ಶಿಲ್ಪ

ಸ್ತ್ರೀಯು ಎಡಬದಿಗೆ ಒಬ್ಬಯೋಗಿಯು ಕೈ ಮುಗಿದು ನಿಂತಿದ್ದಾನೆ.[೨] ಈ ಶಿಲ್ಪವು ಸರಳ ಉಬ್ಬು ಶಿಲ್ಪವಾಗಿದ್ದು ಸಣ್ಣ ಅಳತೆಯಲ್ಲಿದೆ ಆದರೂ ಕಲಾವಿದ ತನ್ನ ಇತಿಮಿತಿಯಲ್ಲಿ ಸಾಧ್ಯವಾದಷ್ಟು ವಿವರವಾಗಿ ಕೆತ್ತಿರುವುದನ್ನು ನಾವು ಕಾಣಬಹುದು ಚಚ್ಚೌಕದಲ್ಲಿ ಜ್ಯಾಮಿತಿಗೆ ಹೆಚ್ಚು ಒತ್ತು ಕೊಟ್ಟಿದ್ದು ಎಲ್ಲವೂ ಚಚ್ಚೌಕ ಅಥವಾ ಆಯುತದೊಳಗೆ ರಚಿಸಲ್ಪಟ್ಟಿದೆ.

**ಶೈಲಿ**

ಶೈಲಿ ಎಂಬುದು ಸಾಮನ್ಯವಾಗಿ ಕೆತ್ತನೆಯಲ್ಲಿ ಅಥವಾ ಚಿತ್ರಕಲೆಯಲ್ಲಿ ಕಲಾವಿದನು ನಡೆಯುವ ದಾರಿ ಎಂದು ಹೇಳಬಹುದು. ಇದು ಸಾಮನ್ಯವಾಗಿ ಆ ಕಾಲಕ್ಕೆ (ಅಂದರೆ ಶಿಲ್ಪ ರಚನೆಯಾಗುವ ಕಾಲಕ್ಕೆ) ಸಂಬಂಧ ಪಟ್ಟದಾಗಿದೆ. ಅಂದರೆ ಆ ಕಾಲದಲ್ಲಿ ಪ್ರಚಲಿತದಲ್ಲಿರುವ ರೀತಿ ಇಂದು ಹೆಚ್ಚಾಗಿ ಶಿಲ್ಪಗಳು ಹೊಯ್ಸಳರ ಕಲಾತ್ಮಕ ಶೈಲಿಯಲ್ಲಿ ರಚನೆಯಾಗುತ್ತವೆ. ಇದಕ್ಕೆ ಕಾರಣ ಇದರಲ್ಲಿ ಕಂಡು ಬರುವ ಕಲಾತ್ಮಕತೆ ಮತ್ತು ಅಲಂಕರಣ ಇದು ಜನರಿಗೆ ಹೆಚ್ಚು ಇಷ್ಟವಾಗಿರುವುದೂ ಒಂದು ಕಾರಣವಾಗಿದೆ. ಆದರೆ ಲಜ್ಜಾಗೌರಿ ಶಿಲ್ಪವನ್ನು ನಮಗೆ ಹೆಚ್ಚಾಗಿ ಕಾಣಸಿಗುವುದು ಕ್ರಿ.ಶ. ೬ ರಿಂದ ಹನ್ನೊಂದನೆ ಶತಮಾನದವುಗಳು ಅಲ್ಲದೆ ಕರ್ನಾಟಕದ ಬೇರೆ ಬೇರೆ ಪ್ರಾಂತ್ಯಗಳಲ್ಲಿ ಆಗಿನ ಕಾಲದಲ್ಲಿ ಚಲಾವಣೆಯಲ್ಲಿದ್ದ ಶೈಲಿಯಲ್ಲಿಯೇ ಈ ಶಿಲ್ಪಗಳು ಹೆಚ್ಚಾಗಿ ರಚನೆಯಾಗಿವೆಯಾದರೂ ಇವುಗಳನ್ನು ಈ ಶಿಲ್ಪಗಳು ವ್ಯಕ್ತ ಮಾಡುವ ಅಂಗ, ಪ್ರಮಾಣ, ರೂಪಾಕಾರ, ಅಲಂಕರಣ, ಕೆತ್ತನೆಯ ರೀತಿ ಕುಸುರಿಯ ಕೆಲಸ, ಇವುಗಳ ಮೇಲೆ ಈ ಶಿಲ್ಪಗಳ ಶೈಲಿಗಳ ನಿರ್ಧಾರವಾಗುತ್ತವೆ. ಈ ದೃಷ್ಟಿಕೋನದಿಂದ ಈ ಶಿಲ್ಪಗಳನ್ನು ಎರಡು ಭಾಗ ಮಾಡಿ ನೋಡಬಹುದಾಗಿದೆ.

ಒಂದು ಸಾಂಪ್ರದಾಯಿಕ ಶೈಲಿಯಾದರೆ ಇನ್ನೊಂದು ಜನಪದ ಶೈಲಿ ಎಂದು ಸಾಂಪ್ರದಾಯಿಕತೆ ಶೈಲಿಯು ಅಂದಿನ ರಾಜಾಡಳಿತಕ್ಕೆ ಒಳಪಟ್ಟ ಪ್ರಚಲಿತದಾಗಿದ್ದು, ಇನ್ನೊಂದು ಅಂದರೆ ಜನಪದ ಶೈಲಿಯು ಎಲ್ಲಾ ಕಾಲಕ್ಕೆ ಒಂದೇ ರೀತಿಯಾಗಿದ್ದು ಶೈಲಿಯು ಬಗ್ಗೆ ಒತ್ತು ನೀಡದೆ ಕೇವಲ ಉದ್ದೇಶಿತ ವಿವರಣೆಗಳನ್ನು ಹೊಂದಿದ್ದು, ಸರಳವಾಗಿ ನಿರ್ಮಾಣ ಮಾಡುವುದಾಗಿರುತ್ತದೆ. ಇಲ್ಲಿ ಕಲಾವಿದನಿಗೆ ಶಿಲ್ಪದ ಕಲಾತ್ಮಕತೆ ಮತ್ತು ಸಾಂಪ್ರದಾಯಕತೆ ಮುಖ್ಯವಾಗುವುದಿಲ್ಲ. ಲಜ್ಜಾಗೌರಿಯ ಬಹಳಷ್ಟು ಶಿಲ್ಪಗಳು ಈ ರೀತಿ ನಿರ್ಮಾಣವಾಗಿವೆ. ಇವುಗಳಲ್ಲಿ ಕೆಲ ಶಿಲ್ಪಗಳು ಇಂದಿಗೂ ಜನರಿಂದ ಪೂಜಿಸಲ್ಪಡುತ್ತಿವೆ.

**ಸಾಂಪ್ರದಾಯಿಕ ಶೈಲಿಯ ಶಿಲ್ಪಗಳು**

ಲಜ್ಜಗೌರಿಯ ಶಿಲ್ಪಗಳು ಬಹಳಷ್ಟು ಸಾಂಪ್ರದಾಯಿಕ ಶೈಲಿಯಲ್ಲಿ ಗುರುತಿಸಲ್ಪಡ ಬಹುದಾದವುಗಳು ನಮಗೆ ದೊರಕಿವೆ. ಅವುಗಳಲ್ಲಿ ಪ್ರಮುಖವಾದ ಶಿಲ್ಪಗಳೆಂದರೆ ನಾಗನಾಥ(ನಾಗರಾಳ) ದೇವಲಾಯದ ಶಿಲ್ಪ ಇಂದು ಇದು ಬಾದಾಮಿ ವಸ್ತು ಸಂಗ್ರಹಾಲಯದಲ್ಲಿದ್ದು ಅಂದಿನ ಕಾಲದ ಅತ್ಯಂತ ಪ್ರಮುಖ ಶಿಲ್ಪವಾಗಿದೆ. ಅದೇ ಕಾಲದ ಇನ್ನೊಂದು ಶಿಲ್ಪ ಕರ್ನೂಲಿನ ಸಂಗಮೇಶ್ವರ ದೇವಾಲಯದ ಸಮ್ಮುಚ್ಚಯದಲ್ಲಿರುವ ಶಿಲ್ಪ.

ಮಹಾಕೂಟ ದೇವಾಲಯದ ಆವರಣದಲ್ಲಿರುವ ಶಿಲ್ಪ ಆಲಂಪುರದ ಸಂಗಮೇಶ್ವರ ದೇವಾಲಯದಲ್ಲಿರುವ ಶಿಲ್ಪ, ಐಹೊಳೆಯ ಸಂಗ್ರಹಾಯಲದ ಆವರಣದಲ್ಲಿರುವ ಶಿಲ್ಪ ಬಾಗಲಕೋಟೆಯ ವಸ್ತು ಸಂಗ್ರಹಾಲಯದಲ್ಲಿರುವ ಶಿಲ್ಪ ಮುಂತಾದವುಗಳು ಈ ಶೈಲಿಯಲ್ಲಿ ಗುರುತಿಸ ಬಹುದಾದಂತಹ ಶಿಲ್ಪಗಳಾಗಿವೆ.

ಇವುಗಳಲ್ಲಿ ಬಾದಾಮಿಯ ಶಿಲ್ಪ, ಮಹಾಕೂಟದ ಶಿಲ್ಪ, ಆಲಂಪುರದ ಶಿಲ್ಪ, ಕರ್ನೂಲಿನ ಸಂಗಮೇಶ್ವರ, ಸಮುಚ್ಚಯದ ಶಿಲ್ಪ ಇವುಗಳು ಹೆಚ್ಚು ಕಡಿಮೆ ಒಂದೇ ಆಕಾರದಲ್ಲಿ ಸಾಮ್ಯತೆಯನ್ನು ಕಾಣಬಹದು. ಈ ಶೀಲ್ಪಗಳ ರಚನೆಯಲ್ಲಿ ಆಲಂಪುರದ ಶಿಲ್ಪ, ಮಹಾಕೂಟದ ಶಿಲ್ಪ ಮತ್ತು ಬಾದಾಮಿಯ ಶಿಲ್ಪಗಳು ಒಂದೇ ರೀತಿಯಲ್ಲಿವೆ. ಬಹುಶಃ ಒಬ್ಬನೇ ಶಿಲ್ಪಿ ಅಥವಾ ಶಿಲ್ಪಿಗಳ ಗುಂಪು ಈ ಶಿಲ್ಪಗಳನ್ನು ರಚಿಸಿರಬಹುದಾಗಿದೆ. ಇವುಗಳ ಕಾಲಮಾನವು ಸರಿಸುಮಾರು ಒಂದೇ ಇದ್ದಂತಿದೆ. ಈ ಶಿಲ್ಪಗಳ ಸಾಮ್ಯತೆಗಳಿವೆ. ಹೆಚ್ಚು ಕಲಾತ್ಮಕತೆಯನ್ನು ನಯವಾದ ಕೆತ್ತನೆಯನ್ನು ಹೊಂದಿರುವ ಈ ಶಿಲ್ಪಗಳಲ್ಲಿಯ ಅಲಂಕರಣವು ಹೆಚ್ಚು ಗಮನ ಸೆಳೆಯುತ್ತದೆ. ಕಮಲಗಳ ಕೆತ್ತನೆ ಕಮಲದ ದಂಟನ್ನು ಸುರಳಿಯಾಗಿ ಲಾವಣ್ಯ ಭರಿತವಾಗಿ ಕೆತ್ತಿರುವ ರೀತಿ ಕುತ್ತಿಗೆಯಲ್ಲಿರುವ ಆಭರಣ ಹೊಟ್ಟೆಯ ಕೆಳಭಾಗದಲ್ಲಿರುವ ಉಡಿದಾರ (ಸೊಂಟಪಟ್ಟಿ)ದಲ್ಲಿ ಕಂಡುಬರುವ ಕೆತ್ತನೆ ಹೀಗೆ ಪ್ರತಿಯೊಂದು ವಿಭಾಗದಲ್ಲಿಯೂ ಕಲಾವಿದ ತನ್ನ ಪರಿಪೂರ್ಣತೆಯನ್ನು ತೋರಿದ್ದಾನೆ. ಮಹಾಕೂಟದ ಶಿಲ್ಪವು ಇಂದು ಛಿದ್ರವಾಗಿದ್ದು ಅಳಿದುಳಿದ ಭಾಗದಲ್ಲಿಯ ಕೆತ್ತನೆಯಿಂದ ಈ ಶಿಲ್ಪವು ಬಾದಾಮಿಯ ಶಿಲ್ಪವನ್ನು ಸಂಪೂರ್ಣವಾಗಿ ಹೋಲುತ್ತದೆ.

ಬಾಗಲಕೋಟ ಜಿಲ್ಲೆ, ಹುನಗುಂದ ತಾಲೂಕಿನ ಐಹೊಳೆ ದೇವಾಲಯಗಳ ಸಮೂಹದಲ್ಲಿ ಅಲ್ಲಿಯ ಬಯಲಿನಲ್ಲಿ ಇರಿಸಲಾದ ಶಿಲ್ಪಗಳಲ್ಲಿ ಲಜ್ಜಾಗೌರಿಯ ಶಿಲ್ಪವೊಂದಿದೆ ದೊಡ್ಡ ಗಾತ್ರದ ಈ ಶಿಲ್ಪವೂ ಸಂಪೂರ್ಣ ಹಾಳಾಗಿದ್ದು ಈ ಶಿಲ್ಪದ ಲಕ್ಷಣಗಳನ್ನು ಮತ್ತು ಅಳಿದುಳಿದ ಭಾಗಗಳನ್ನು

# "ಸಾಂಪ್ರದಾಯಕ ಶಿಲ್ಪಗಳು"



ಬಾಗಲಕೋಟ ಜಿಲ್ಲೆ, ಬಾದಾಮಿ ತಾಲೂಕು, ಮಹಾಕೂಟದಲ್ಲಿರುವ ಲಜ್ಜಾಗೌರಿ ಶಿಲ್ಪ



ಆಂಧ್ರ ಪ್ರದೇಶ, ಕರ್ನೂಲ ಜಿಲ್ಲೆ. ಆಂಲಮರ ಲಜ್ಜಾಗೌರಿ ಶಿಲ್ಪ

## "ಸಾಂಪ್ರದಾಯಕ ಶಿಲ್ಪಗಳು"



ಬಾಗಲಕೋಟ ಜಿಲ್ಲೆ, ಹುನಗುಂದ ತಾಲೂಕು, ಐಹೊಳೆಯಲ್ಲಿರುವ ಲಜ್ಜಾಗೌರಿ ಶಿಲ್ಪ



ಬಾಗಲಕೋಟೆಯ ಜಾನಪದ ವಸ್ತು ಸಂಗ್ರಹಾಲಯದಲ್ಲಿರುವ ಲಜ್ಜಾಗೌರಿ ಶಿಲ್ಪ



ಬಾಗಲಕೋಟ ಜಿಲ್ಲೆ, ಬಾದಾಮಿ ವಸ್ತು ಸಂಗ್ರಹಾಲಯದಲ್ಲಿರುವ ಲಜ್ಜಾಗೌರಿ ಶಿಲ್ಪ



ಆಂಧ್ರ ಪ್ರದೇಶ, ಕರ್ನೂಲ ಜಿಲ್ಲೆ, ಆಲಂಪುರ ಲಜ್ಜಾಗೌರಿ ಶಿಲ್ಪ

ನೋಡಿ ಲಜ್ಜಾಗೌರಿಯ ಶಿಲ್ಪವಿದು ಎಂದು ಊಹಿಸುವಂತಿದೆ. ಈ ಶಿಲ್ಪವು ಬಹುಶಃ ಕ್ರಿ.ಶ.೫-೬ ಶತಮಾನಕ್ಕೆ ಸೇರಿದ್ದಾಗಿದೆ. ಇದು ಬಹುಪಾಲು ಬಾದಾಮಿಯ ವಸ್ತುಸಂಗ್ರಹಾಲಯದಲ್ಲಿರುವ ಶಿಲ್ಪವನ್ನು ಹೋಲುತ್ತದೆ ಆದರೆ ಅದಕ್ಕಿಂತಲೂ ದೊಡ್ಡದಾಗಿದೆ ಮಾತ್ರವಲ್ಲ ಹೆಚ್ಚು ತ್ರಿಮಾನಾಕಾರ (High Relief) ವನ್ನು ಹೊಂದಿದೆ ನಸುಗೆಂಪು ಕಲ್ಲಿನಲ್ಲಿ ಕೊರೆದ ಶಿಲ್ಪವಿದು. ಎರಡು ಕೈಗಳನ್ನು ಮೇಲಕ್ಕೆ ಮಡಚಿದಂತಿದೆ. ಮುಂಗೈ ಭಾಗಗಳು ತುಂಡಾಗಿವೆ ತೊಡೆ ಭಾಗವೂ ತುಂಡಾಗಿದ್ದು ಸಮೀಪದಲ್ಲಿಯೇ ಇರಿಸಲಾಗಿದೆ ಸೊಂಟದ ಭಾಗವು ಸಣ್ಣದಾಗಿದ್ದು ಕುಂಭದ ಆಕಾರದಲ್ಲಿದೆ ಶಿರೋಭಾಗವೂ ಕಾಣೆಯಾಗಿದೆ. ಹೆಚ್ಚಿನ ವಿವರಗಳು ಇಲ್ಲಿ ಗುರುತಿಸಲು ಸಾಧ್ಯವಾಗುವುದಿಲ್ಲವಾದರೂ ಮೇಲ್ನೋಟಕ್ಕೆ ಇದು ಅಂದಿನ ಕಾಲದಲ್ಲಿ ಕೆತ್ತಲ್ಪಟ್ಟ ಬಹು ಸುಂದರ ಶಿಲ್ಪಗಳಲ್ಲಿ ಒಂದೆರಡು ಹೇಳಬಹುದು.

ಬಾಗಲಕೋಟೆಯ ವಸ್ತು ಸಂಗ್ರಹಾಲಯದಲ್ಲಿರುವ ಶಿಲ್ಪವು ಸಂಪೂರ್ಣವಾಗಿ ಕುಳಿತಿರುವ ಭಂಗಿಯಲ್ಲಿರುವ ಶಿಲ್ಪ. ಈ ಶಿಲ್ಪವೂ ಸಾಂಪ್ರದಾಯಿಕ ಶೈಲಿಯ ರಚಿತವಾಗಿರುವ ಶಿಲ್ಪವಾದರೂ ಬಾದಾಮಿಯ ಅಥವಾ ಮಹಾಕೂಟದಲ್ಲಿರುವ ಶಿಲ್ಪಗಳಿಗಿಂತ ತೀರ ಭಿನ್ನವಾಗಿದೆ. ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರುವ ಈ ಶಿಲ್ಪದಲ್ಲಿ ತಾವರೆ, ಹೂವುಗಳಿಲ್ಲ. ಆಭರಣಗಳಿಲ್ಲ, ಅಂಗಪ್ರಮಾಣ, ಶಿಲ್ಪಶಾಸ್ತ್ರದ ರೀತಿಯಲ್ಲಿ ರಚಿಸಲ್ಪಟ್ಟಿದೆ. ಉಳಿದಡೆಯಲ್ಲಿ ಕೈಗಳು ತಾವರೆ ಹೂವನ್ನು ಎರಡು ಬದಿ ಹಿಡಿದುಕೊಂಡಿದ್ದರೆ, ಬಾಗಲಕೋಟ ವಸ್ತು ಸಂಗ್ರಹಾಲಯದ ಈ ಶಿಲ್ಪದಲ್ಲಿ ಕೈಗಳು ಯೋನಿಯನ್ನು ಅಗಲಿಸಿ ತೋರಿಸುವ ರೀತಿಯಲ್ಲಿವೆ. ಆಲಂಪುರದ ವಸ್ತು ಸಂಗ್ರಹಾಲಯ ದಲ್ಲಿರುವ ಶಿಲ್ಪಗಳಲ್ಲಿ ಒಂದಾದ ಕೂಡುವೆಲ್ಲಿಯ ಸಂಗಮೇಶ್ವರ ದೇವಾಲಯದ ಶಿಲ್ಪವೂ ಸಾಂಪ್ರದಾಯಿಕ ಶೈಲಿಯಲ್ಲಿಯೇ ರಚಿಸಲ್ಪಟ್ಟಿರುವ ಶಿಲ್ಪ ನಾಜೂಕು ವಿವರಗಳನ್ನು ಸ್ಪಷ್ಟವಾಗಿ ಕೆತ್ತಿರುವ ಈ ಶಿಲ್ಪವು ಅಂದಿನ ಕಾಲದ ಕಲಾವಿದರ ಶಿಲ್ಪಜ್ಞಾನದ ಕುಸುರಿ ಕೆತ್ತನೆ ಸಂಯೋಜನೆಗಳಿಗೆ ಉತ್ತಮ ನಿದರ್ಶನವಾಗಿದೆ. ಈ ಶಿಲ್ಪವು ಪೂಜೆಯ ಉದ್ದೇಶಕ್ಕೆಂದು ರಚಿಸಲಾಗಿರುವುದು ಆ ಶಿಲ್ಪದಲ್ಲಿ ಅಭಿಷೇಕದ ನೀರು ಹರಿದು ಹೋಗಲು ರಚಿಸಲಾಗಿರುವ ಪಾಣಿ ಪೀಠವನ್ನು ಗಮನಿಸಿದಾಗ ತಿಳಿಯಬಹುದಾಗಿದೆ.

**ಜಾನಪದ ಶೈಲಿಯ ಶಿಲ್ಪಗಳು**

ಲಜ್ಜಾಗೌರಿಯ ಹಲವಾರು ಶಿಲ್ಪಗಳು ಸರಳವಾಗಿ ಜಾನಪದ ಶೈಲಿಯಲ್ಲಿಯೂ ರಚಿಸಲ್ಪಟಿರುವುದನ್ನು ನಾವು ಗಮನಸಿಬೇಕಾಗಿದೆ. ಇಲ್ಲಿ ಅಲಂಕರಣಕ್ಕಾಗಲಿ ಅಂಗಪ್ರಮಾಣಕ್ಕಾಗಲಿ ವಿಶೇಷ ಮಹತ್ವ ನೀಡಿ ಮಾತ್ರವಲ್ಲದೆ ಶಿಲ್ಪವನ್ನು ಕೆತ್ತಲಾಗಿರುವ ಶಿಲ್ಪ (ಕಲ್ಲು ಚಪ್ಪಡಿ) ಕ್ಕೂ

ವಿಶೇಷ ಮಹತ್ವ ನೀಡಿಲ್ಲ ತೀರಾ ಸರಳವಾಗಿ ಮುಖ್ಯವಾದ ವಿಷಯಕ್ಕಷ್ಟೆ ಗಮನ ನೀಡಿ ಕೆತ್ತಲಾಗಿರುವ ಶಿಲ್ಪಗಳು ಇಲ್ಲಿ ಕಲಾವಿದರು ಶಿಲ್ಪಶಾಸ್ತ್ರ ಕುಶಲಿಗಳಾಗಿ ಇದ್ದಂತಿಲ್ಲ ಬಹುಶಃ ಸ್ಥಳೀಯ ಕಸಬುದಾರರೇ ರಚಿಸಿರಬಹುದಾಗಿದೆ. ಸಾಂಕೇತಿಕತೆಗೆ ಇಲ್ಲಿ ಪ್ರಾಮುಖ್ಯತೆ ಇರುವುದನ್ನು ನಾವು ಕಾಣಬಹುದಾಗಿದೆ.

ಬೀಳಗಿಯ ದೇವಾಲಯ ಆವರಣದಲ್ಲಿರುವ ಶಿಲ್ಪವು ದ್ವಿಮಾನದಲ್ಲಿ ಕೆತ್ತಲ್ಪಟ್ಟಿದೆ ಈ ಶಿಲ್ಪದಲ್ಲಿ ಸ್ಥನಗಳು ಆಕಾರದಲ್ಲಿ ಬಹಳೇ ಸಣ್ಣವು ತೀರಾ ಸಣ್ಣದಾಗಿರುವ ಎರಡು ವೃತ್ತಗಳಿದ್ದು ಕುತ್ತಿಗೆಯಲ್ಲಿರುವ ಹಾರವೇ ಎದ್ದು ಕಾಣುತ್ತದೆ. ಬುಜ ಮತ್ತು ಎದೆಯ ಭಾಗ ಅಗಲವಾಗಿದ್ದು ಕೆಳಗೆ ಜೋತುಬಿದ್ದಂತೆ ಮತ್ತು ಸೊಂಟದ ಭಾಗವು ತೀರಾ ಸಪೂರವಾಗಿದ್ದು ತೊಡೆಗಳು ಅಗಲವಾಗಿ ಮೊಣಕಾಲುಗಳು ಮೇಲೆಕ್ಕೆತ್ತಿದ್ದು ಎರಡು ಪಕ್ಕದಲ್ಲಿ ಚಾಚಿ ಕೊಂಡಿರುವುದನ್ನು ಗಮನಿಸಿದಾಗ ಸಂಭೋಗ ಕಾಲವನ್ನು ಸೂಚಿಸುತ್ತದೆ. ತಲೆಯ ಭಾಗದಲ್ಲಿರುವ ಕಮಲದ ವೃತ್ತವನ್ನು ಇಲ್ಲಿ ವಿಶೇಷವಾಗಿ ಉಲ್ಲೇಖಿಸಬಹುದು. ಮೇಲ್ಮುಖವಾಗಿರುವ ವೃತ್ತದಲ್ಲಿ ಸರಳವಾಗಿ ಕಮಲದ ದಳಗಳನ್ನು ಕೆತ್ತಲಾಗಿದ್ದು ಎಸಳುಗಳು ಅರಳಿಕೊಂಡಿದ್ದರು ನಾಗರಾಳದ ಶಿಲ್ಪದಂತೆ ಅಪರಿಮಿತವಾಗಿಲ್ಲ. ಕಮಲದ ಎಸಳುಗಳಿಗಿಂತಲೂ ವೃತ್ತಕ್ಕೆ ಪ್ರಾಮುಖ್ಯತೆ ನೀಡಲಾಗಿದೆ. ಕೈ ಬೆರಳುಗಳು ಕೂಡಾ ಅಗಲಿಸಲ್ಪಟ್ಟಿದ್ದು ಅಂಗಪ್ರಮಾಣ ಪರಿಪೂರ್ಣವಾಗಿಲ್ಲ ಕೈಗಳನ್ನು (ಬೆರಳುಗಳನ್ನು) ಸಂಜ್ಞಾರ್ಥಕವಾಗಿ ಕೆತ್ತಲಾಗಿದೆ. ತೋಳುಗಳಲ್ಲಿರುವ ತೋಳುಬಂದವು ಸರ್ಪಾಕಾರದಲ್ಲಿರದೆ ರುದ್ರಾಕ್ಷಿ ಕಾಯಿಗಳಂತಿರುವುದನ್ನು ಗಮನಿಸಿದರೆ ಶೈವ ಪಂಥದ ಉಛ್ರಾಯ ಕಾಲದಲ್ಲಿ ಇದನ್ನು ಕೆತ್ತಲಾಗಿರುವುದನ್ನು ತೋರಿಸುತ್ತದೆ. ಕುತ್ತಿಗೆಯಲ್ಲಿರುವ ಸರವು ಈ ಮಾತನ್ನು ಪುಷ್ಠಿಕರಿಸಬಹುದು.

ಇಂತಹದೆ ಮಾತನ್ನು ಹುಲಿಗೆಮ್ಮನ ಕೊಳ್ಳದ ಶಿಲ್ಪಗಳು ನಾವು ಅನ್ವಹಿಸಬಹುದಾಗಿದೆ ಹುಲಿಗೆಮ್ಮನಕೊಳ್ಳದ ಶಿಲ್ಪಗಳಲ್ಲಿ ಒಂದರ ಶಿರೋಭಾಗದ ಕಮಲದ ದಳಗಳು ಅರಳಿಕೊಂಡಿದ್ದು ಮೂರು ಹಂತಗಳಲ್ಲಿದ್ದರೂ ದಳಗಳು ವಿವರವಾಗಿದ್ದು ವೃತ್ತವು ಬೀಳಗಿಯ ಶಿಲ್ಪದ ವೃತ್ತವನ್ನು ಹೋಲುತ್ತವಾದರು ಹೆಚ್ಚು ಉಬ್ಬು ಹೊಂದಿದೆ ಸಣ್ಣ ಸ್ಥನಗಳು ಸಪೂರವಾದ ಕೈಗಳು, ಕಾಲುಗಳು ದೇಹಭಾಗಕ್ಕೆ ಹೋಲಿಸಿದರೆ ಸಣ್ಣದಾಗಿವೆ. ಲಭ್ಯವಾದ ಚಪ್ಪಡಿ ಕಲ್ಲಿನಲ್ಲಿ ಕೆತ್ತಿದಂತಿರುವ ಈ ಶಿಲ್ಪವು ಸರಳವಾಗಿದ್ದು ಜಾನಪದ ರೀತಿಯಲ್ಲಿ ಕೆತ್ತಲ್ಪಟ್ಟಿದೆ, ಎಂದು ಖಂಡಿತವಾಗಿ ಹೇಳ ಬಹುದಾಗಿದೆ. ಇಲ್ಲಿರುವ ಇನ್ನೊಂದು ಶಿಲ್ಪವು ಇದೇರೀತಿಯಾಗಿದ್ದು ಕಮಲದ ಜಾಗದಲ್ಲಿ ವೃತ್ತಮಾತ್ರ ಇಂದು ಕಂಡು ಬರುತ್ತದೆ ಆದರೂ ಶಿಲ್ಪವನ್ನು ಗಮನಿಸಿದರೆ ಮೊದಲಿನ ಶಿಲ್ಪದಂತೆ

# "ಜಾನಪದ ಶಿಲ್ಪಗಳು"



ಬಾಗಲಕೋಟ ಜಿಲ್ಲೆ, ಬೀಳಗಿ ಸಿದ್ದೇಶ್ವರ ದೇವಾಲಯದ
ಆವರಣದಲ್ಲಿರುವ ಲಜ್ಜಾಗೌರಿ ಶಿಲ್ಪ





ಬಾಗಲಕೋಟ ಜಿಲ್ಲೆ. ಬಾದಾಮಿ ತಾಲೂಕು. ಹುಲಿಗೆಮ್ಮನ ಕೊಳ್ಳದಲ್ಲಿರುವ ಲಜ್ಜಾಗೌರಿ ಶಿಲ್ಪಗಳು

ಇದೆ ಎಂದು ಹೇಳಬಹುದು. ಈ ಶಿಲ್ಪಗಳನ್ನು ನಾವು ಸೂಕ್ಷ್ಮವಾಗಿ ನೋಡಿದಾಗ ಸಾಂಪ್ರದಾಯಕವಾದ ರೀತಿಯಲ್ಲಿ ಕೆತ್ತಿದ ಅಲಂಕಾರ ಶಿಲ್ಪಗಳಿಗಿಂತ ಇವು ತೀರಾ ಭಿನ್ನರೀತಿಯಲ್ಲಿರುವುದನ್ನು ಗಮನಿಸಬಹುದು. ಬಹುಶಃ ಸ್ಥಳಿಯ ಕಸಬುದಾರರು ಎಂದರೆ ಗ್ರಾಮೀಣ ಶಿಲ್ಪಿಗಳು ಸ್ಥಳಿಯರ ಉದ್ದೇಶಕ್ಕೆ ಈ ಶಿಲ್ಪಗಳನ್ನು ಕೆತ್ತಿರಬಹುದಾದ ಸಾಧ್ಯತೆ ಇದೆ. ಈ ಶಿಲ್ಪಗಳು ತೀರಾ ಕುಶಲ ಕಲಾವಿದರು ಇಲ್ಲದೇ ಇರುವುದರಿಂದ ಉದ್ದೇಶಕ್ಕೆ ತಕ್ಕಷ್ಟೆ ಕೆತ್ತಿರಬಹುದು. ಮಜತೀಯ ದೇವಾಲದ ಕಂಬದ ಮೇಲಿರುವ ಶಿಲ್ಪವು ಉಬ್ಬು ಶಿಲ್ಪವಾಗಿದೆ. ಇದನ್ನು ಪುಷ್ಟಿಕರಿಸುತ್ತದೆ. ಸಿದ್ದನಕೊಳ್ಳದ ಹಾಸು ಬಂಡೆಯ ಮೇಲೆ ಕೆತ್ತಲ್ಪಟ್ಟಿರುವ ಶಿಲ್ಪವು ಹೀಗೆ ಇರುವುದನ್ನು ನಾವಿಲ್ಲಿ ಗಮನಿಸ ಬೇಕಾಗುತ್ತದೆ.

**ಸಂಯೋಜನೆ**

ಲಜ್ಜಾಗೌರಿಯ ಶಿಲ್ಪಗಳಲ್ಲಿಯ ಸಂಯೋಜನೆಯನ್ನು ವಿಶ್ಲೇಶಿಸುವುದು ಸ್ವಲ್ಪ ಕ್ಲಿಷ್ಟವಾದರು ಅಗತ್ಯವೆಂದು ನನ್ನ ಭಾವನೆ. ಕ್ಲಿಷ್ಟವಾಗಿರಲು ಕಾರಣವೆಂದರೆ ಶಿಲ್ಪರಚನೆಯ ಉದ್ದೇಶ ಸ್ಪಷ್ಟವಾಗಿಲ್ಲದಿರುವುದು. ಒಂದಾದರೆ ನಂತರದ ದಿನಗಳಲ್ಲಿ ಈ ಶಿಲ್ಪ ರಚನೆಯಾದುದು ಎಲ್ಲಿಯೂ ಕಂಡುಬರದಿರುವುದು. ಲಭ್ಯ ಶಿಲ್ಪಗಳು ಕೆಲವೊಂದು ಬಗ್ನವಾಗಿರುವುದು ಆದರೂ ಇಲ್ಲಿ ದೊರಕಿರುವ ಶಿಲ್ಪಗಳ ಆಧಾರದಿಂದ ಈ ಶಿಲ್ಪಗಳನ್ನು ವಿಶ್ಲೇಷಿಸಬಹುದು.

ಲಜ್ಜಾಗೌರಿ ಶಿಲ್ಪಗಳು ಹೆಚ್ಚಾಗಿ ರಚನೆಯಾಗಿರುವುದು ಕಲ್ಲುಚಪ್ಪಡಿಗಳಲ್ಲಿ ಸಾಮಾನ್ಯವಾಗಿ ಶಿಲ್ಪಗಳು ತ್ರಿಮಾನಾ ಅಥವಾ ಮೂರನೆ ಎರಡರಷ್ಟು ಉಬ್ಬಿದ್ದು ಕೇವಲ ಬೆನ್ನಿನ ಭಾಗ ಮಾತ್ರ ಚಪ್ಪಡಿಯೋಂದಿಗೆ ಸೇರಿರುತ್ತದೆ. ಆದರೆ ಲಜ್ಜಾಗೌರಿ ಶಿಲ್ಪಗಳು ಹಾಗಿಲ್ಲ (ಬಾಗಲಕೋಟದ ಶಿಲ್ಪವನ್ನು ಹೊರತು ಪಡಿಸಿ) ಈ ಶಿಲ್ಪಗಳು ಹೆಚ್ಚಾಗಿ ಉಬ್ಬು ಶಿಲ್ಪಗಳು (Relief) ಕೇವಲ ಮುಂಭಾಗ ಮಾತ್ರ ಕೆತ್ತಲ್ಪಟ್ಟಿರುತ್ತದೆ ಎಲ್ಲಾ ಭಾಗಗಳು ಒಂದೊಂಕ್ಕೊಂದು ಬೆಸೆದುಕೊಂಡಿರುತ್ತವೆ. ಕಾಲನ್ನು ಎರಡುಕಡೆ ಅಗಲಿಸಿರುವುದರಿಂದ ಮೊಣಕಾಲುಗಳೇ ಹೆಚ್ಚು ಉಬ್ಬಿರುತ್ತವೆ ನಂತರಭಾಗ ಸ್ಥನಗಳು ಮತ್ತು ಶಿರೋಭಾಗದಲ್ಲಿರುವ ಕಮಲ. ಬಾದಾಮಿಯ ಶಿಲ್ಪದಲ್ಲಿ ಮುಂಗೈಗಳು ಮಾತ್ರ ತ್ರಿಮಾನದಲ್ಲಿವೆ. ಮಿಕ್ಕಿದ ಎಲ್ಲಾ ಭಾಗಗಳು ಚಪ್ಪಡಿಗೆ ಬೆಸೆದುಕೊಂಡಿರುತ್ತವೆ ಈ ಹಿನ್ನೆಲೆಯಲ್ಲಿ ಇವುಗಳನ್ನು ಉಬ್ಬು ಶಿಲ್ಪಗಳೆಂದು (High Relief) ಕರೆಯುಲಾಗಿದೆ. ಸಾಂಪ್ರದಾಯಿಕ ಶಿಲ್ಪಶಾಸ್ತ್ರದಲ್ಲಿ ಇದನ್ನು 'ಚಿತ್ರಾರ್ಥ' ಎಂದು ಕರೆಯುಲಾಗಿದೆ.

**ಸಾಮಾನ್ಯ ಅಂಶಗಳು**

ಲಜ್ಜಾಗೌರಿ ಶಿಲ್ಪದಲ್ಲಿರುವ ಸಾಮಾನ್ಯ ಅಂಶಗಳೆಂದರೆ ಸ್ಥನಗಳು, ಯೋನಿ, ಅಗಲಿಸಿದ ತೊಡೆಗಳು, ತಲೆಯ ಭಾಗದಲ್ಲಿ ಕಮಲ ಮತ್ತು ಕೈಗಳಲ್ಲಿ ಕಮಲಗಳು ಇವೆಲ್ಲವನ್ನು ಒಂದೇ ಕಲ್ಲಿನಲ್ಲಿ ಕೆತ್ತಲಾಗಿರುತ್ತದೆ. ಇಲ್ಲಿ ಪ್ರಮುಖವಾಗಿ ಶಿಲ್ಪಿಯು ಗಮನಹರಿಸುವುದು ದೇಹ ಭಾಗಕ್ಕೆ ಅಂದರೆ ಸ್ಥನಗಳು, ಯೋನಿ, ಎತ್ತರಿಸಲ್ಪಟ್ಟಿರುವ ಮತ್ತು ಅಗಲಿಸಲ್ಪಟ್ಟಿರುವ ತೊಡೆಗಳಿಗೆ ಈ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಪೂರಕ ಅಂಶಗಳಾದ ಕೈಯಲ್ಲಿಯ ಕಮಲದ ದಳಗಳು ಆಭರಣಗಳು ಕುತ್ತಿಗೆಯಲ್ಲಿರುವ ಸರ, ಕಾಲ್ಗಡಗ ಮುಂತಾದವುಗಳನ್ನು ಚಿತ್ರಿಸಿರುತ್ತಾನೆ ಭಂಗಿಯ ಮಾತಿಗೆ ಬಂದಾಗ ಸಾಮಾನ್ಯವಾಗಿ ಸಂಭೋಗಾಸನ (ಉತ್ತಾನಪಾದ) ಸ್ಥಿತಿಗಳಲ್ಲಿರುವುದು ಸಾಮಾನ್ಯವಾಗಿ ಕಂಡು ಬರುತ್ತದೆ. ಆಲಂಪುರದ ಶಿಲ್ಪಗಳಲ್ಲಿ ದೈಹಿಕ ರಚನೆಗೆ ಹೆಚ್ಚುಗಮನ ನೀಡಿರುವುದನ್ನು ಗಮನಿಸಬಹುದು.

ಶಿಲಾಫಲಕವು ಸಾಮಾನ್ಯವಾಗಿ ಚೌಕಾಕಾರ ಅಥವಾ ಆಯತಕಾರವನ್ನೇ ಹೊಂದಿರುತ್ತದೆ. ಈ ಫಲಕದಲ್ಲಿ ಸಾದ್ಯವಾದಷ್ಟು ಜ್ಯಾಮಿತೀಯ ಚೌಕಟ್ಟಿನೊಳಗೆ ಕೆತ್ತಿರುವುದನ್ನು ಕಾಣಬಹುದು ಬಹುಶಃ ಇಲ್ಲಿ ಕಲಾವಿಧನು ಲಭ್ಯವಾದ ಚೌಕಟ್ಟಿನಲ್ಲಿ ಅಥವಾ ನಿರ್ದಿಷ್ಟ ಅಳತೆಯಲ್ಲಿ ರಚಿಸಿರ ಬಹುದಾದ ಸಾದ್ಯತೆ ಇದೆ. ತ್ರಿಕೋನ, ವೃತ್ತ ಮತ್ತು ಅಂಡಾಕಾರಗಳಲ್ಲಿ ಈ ಶಿಲ್ಪಗಳನ್ನು ರಚಿಸಿರುವುದು ಸೂಕ್ಷ್ಮವಾಗಿ ಗಮನಿಸಿದಾಗ ತಿಳಿಯುತ್ತದೆ. ಈ ಚೌಕಟ್ಟು ಕಾಲ್ಪನಿಕವಾಗಿದ್ದರು ಶಿಲ್ಪ ರಚನೆಯಲ್ಲಿ ಜ್ಯಾಮಿತಿಕ ಅಂಶಗಳು ಕಂಡುಬರುವುದು ಸುಳ್ಳಲ್ಲ. ಆಲಂಪುರದ ವಸ್ತು ಸಂಗ್ರಹಾಲಯದಲ್ಲಿರುವ ಶಿಲ್ಪವು ಪಾಣಿಪೀಠ ಸಹಿತವಾಗಿದ್ದರು ಶಿಲ್ಪವು ಚೌಕಾಕಾರದ ಚೌಕಟ್ಟಿನಲ್ಲಿ ವೃತ್ತಾಕಾರದೊಳಗೆ ಚಿತ್ರವನ್ನು ಸಂಯೋಜಿಸಿರುವುದು. ಸ್ಪಷ್ಟವಾಗುತ್ತದೆ. ಅದೇ ರೀತಿಯಲ್ಲಿ ಬಾದಾಮಿಯ ಶಿಲ್ಪವು ಚೌಕಾಕಾರದೊಳಗೆ ಹಿಡಿದಿರಲ್ಪಟ್ಟಂತೆ ಕೆತ್ತಿರುವುದು ಕಂಡು ಬರುತ್ತದೆ. ಬೀಳಗಿಯ ಶಿಲ್ಪವು ಚೌಕಾಕಾರದ ಚೌಕಟ್ಟಿನಲ್ಲಿ ಕೆತ್ತಲಾಗಿದ್ದು ವೃತ್ತ ತ್ರೀಕೋನಗಳಿಗೆ ಮಹತ್ವ ನೀಡಿದ್ದು ಗಮನಿಸಬಹುದು.

**ವಿನ್ಯಾಸ**

ಮೊದಲೆ ಹೇಳಿದಂತೆ 'ಲಜ್ಜಾಗೌರಿ' ಶಿಲ್ಪಗಳಲ್ಲಿ ವಿನ್ಯಾಸಕ್ಕೆ ಅವಕಾಶಗಳು ಕಡಿಮೆ ಕಲಾವಿಧನಿಗೆ ಸ್ವಾತಂತ್ರ್ಯವು ಕಡಿಮೆ ಸೀಮಿತ ಚೌಕಟ್ಟಿನಲ್ಲಿ ಅಗತ್ಯವಾದ ವಿಚಾರವನ್ನು ಮಾತ್ರ ಕೆತ್ತಲು ಅವಕಾಶವಿರುವುದರಿಂದ ಇಲ್ಲಿ ಹೆಚ್ಚಿನ ಕಲಾತ್ಮಕತೆಯನ್ನಾಗಲಿ ವಿನ್ಯಾಸಯುಕ್ತ ಅಲಂಕಣಗಳನ್ನಾಗಲಿ ನಿರಿಕ್ಷಿಸಲಾಗದು ಆದರೂ ಕಲಾವಿಧ ತನ್ನ ಸಹಜ ಸ್ವಭಾವಕ್ಕನುಸಾರವಾಗಿ

ಲಭ್ಯ ಪರದಿಯಲ್ಲೇ ತನ್ನ ಕಲೆಗಾರಿಕೆಯನ್ನು ವ್ಯಕ್ತಪಡಿಸಿರುವುದನ್ನು ನಾವು ಕಾಣಬಹುದು. ಮುಖ್ಯವಾಗಿ ಕಮಲದ ದಳಗಳನ್ನು ದಂಟನ್ನು ಮತ್ತು ಆಭರಣಗಳ ರಚನೆಯಲ್ಲಿ ಇದನ್ನು ನಾವು ಕಾಣುತ್ತೇವೆ. ನಾಗರಾಳದ ಶಿಲ್ಪಗಳಲ್ಲಿ ಕೈ ಬೆರಳುಗಳು ಲಾವಣ್ಯಭರಿತವಾಗಿ ಸಾಂಪ್ರದಾಯಿಕ ಶಿಲ್ಪ ಶೈಲಿಯ ಸಹಜ ಅಲಂಕರಣ ಕೆತ್ತನೆಯಿಂದ ಗಮನ ಸೆಳೆಯುತ್ತದೆ. ಕೈಯಲ್ಲಿ ಹಿಡಿದಿರುವ ಕಮಲದ ದಂಟು ಸುರುಳಿಯಾಗಿ ಹಿಂದಕ್ಕೆ ಸುತ್ತಿಕೊಂಡಿದ್ದು ಆಕರ್ಶಣೆ ಹೆಚ್ಚುತ್ತದೆ. ಕಮಲದ ದಳಗಳ ರಚನೆಯಲ್ಲಿಯು ಸಾಂಪ್ರದಾಯಿಕ ಶಿಲ್ಪ ಶೈಲಿಯ ಸಂಪೂರ್ಣ ಪರಣಿತಿಯನ್ನು ಕಾಣಬಹುದು. ಆಭರಣಗಳು ಕೂಡಾ ಆಕರ್ಶಕ ರೀತಿಯಲ್ಲಿ ಕೆತ್ತಲಾಗಿರುವುದು. ಇಲ್ಲಿ ಕಂಡುಬರುತ್ತದೆ. ಸಾಂಪ್ರದಾಯಿಕ ವಿನ್ಯಾಸ ದೃಷ್ಠಿಯಿಂದ ನಾಗರಾಳ, ಮಹಾಕೂಟ ಮತ್ತು ಆಲಂಪುರದ ಶಿಲ್ಪಗಳು ಸಾಮ್ಯತೆಯನ್ನು ಹೊಂದಿದೆ. ಉಳಿದಂತೆ ಈ ಶಿಲ್ಪಗಳು ಹೆಚ್ಚಿನ ವಿನ್ಯಾಸವನ್ನು ಹೊಂದಿಲ್ಲ ಆದರೂ ಕಲಾವಿದ ಇಲ್ಲಿ ದೇಹದ ಸೌಂದರ್ಯ ಲಾಲಿತ್ಯವನ್ನು ವ್ಯಕ್ತಪಡಿಸಿರುವುದನ್ನು ನಾವು ಗಮನಿಸಬಹುದಾಗಿದೆ. ಹೆಚ್ಚಿನ ಶಿಲ್ಪಗಳು ಕಾಲದ ಹೊಡೆತಕ್ಕೆ ಸಿಕ್ಕಿ ಹಾಳಾಗಿವೆ. ಕೆಲವು ಶಿಲ್ಪಗಳು ಉದಾ: ಬೀಳಗಿ, ಹುಲಿಗೆಮ್ಮನ ಕೊಳ್ಳ, ಬಳ್ಳಿಗಾವಿ ಇತ್ಯಾದಿ..... ಆಸ್ಥಿಕ ಜನರ ಭಕ್ತಿಯ ಪರಾಕಾಷ್ಟೆಯಲ್ಲಿ ಕರಗಿ ಹೋಗುತ್ತಿವೆ. ಅಧ್ಯಯನಕ್ಕೆ ನಮಗೆ ಸಿಗುವ ಮುಖ್ಯವಾದ ಶಿಲ್ಪಗಳು ವಸ್ತು ಸಂಗ್ರಹಾಲಯದಲ್ಲಿ ಸಂಗ್ರಹಿಸಿಡಲಾಗಿದ್ದು ಈ ಶಿಲ್ಪಗಳ ಮುಖಾಂತರ ಲಜ್ಜಾಗೌರಿ ಶಿಲ್ಪಗಳ ದರ್ಶನವನ್ನು ಪಡೆದುಕೊಳ್ಳಬಹುದಾಗಿದೆ.

ಮುಖ್ಯವಾಗಿ ನಾವು ಗಮನಿಸಬಹುದಾದಂತ 'ಲಜ್ಜಾಗೌರಿ' ಶಿಲ್ಪಗಳ ವಿನ್ಯಾಸದಲ್ಲಿ ಕಂಡುಬರುವುದು ಈ ಶಿಲ್ಪದ ಭಂಗಿ ಸಾಮಾನ್ಯವಾಗಿ ಈ ಶಿಲ್ಪಗಳು 'ಉತ್ತಾನಪಾದ' ಶೈಲಿಯಲ್ಲಿವೆ. 'ಉತ್ತಾನಪಾದ' ಎಂದರೆ ಸ್ತ್ರೀಯು 'ರತಿಕಾಲ'ದಲ್ಲಿ ಇರುವ ಭಂಗಿ ಅಂದರೆ ಬೆನ್ನನ್ನು ನೆಲಕ್ಕೆ ವರಗಿಸಿ ಕಾಲುಗಳನ್ನು ಅಗಲಿಸಿ ನಾಭಿವರೆಗಿನ ಭಾಗಗಳನ್ನು ತೋರಿಸುವ ಶಿಲ್ಪ. ಹೆಚ್ಚಿನ ಎಲ್ಲಾ ಶಿಲ್ಪಗಳು ಇದೇ ಭಂಗಿಯಲ್ಲಿರುವುದರಿಂದ ಮತ್ತು ಶಾಸ್ತ್ರೀಯವಾಗಿ ಶಿಲ್ಪಗಳನ್ನು ರಚಿಸುವಾಗ ನಿರ್ದೇಶಿತ ರೂಪದಲ್ಲಿಯೇ ಇರಬೇಕಾಗಿರುವುದರಿಂದ ಇಲ್ಲಿ ಕಲಾವಿದನಿಗೆ ಸ್ವಾಂತ್ರವು ಕಡಿಮೆ ಹಿಗಾಗಿ ಲಭ್ಯ ಚೌಕಟ್ಟಿನಲ್ಲಿ ಕಲಾವಿದನು ತನ್ನ ಕುಶಲತೆಯನ್ನು ಮೂಲವಸ್ತುವನ್ನು ಬಿಟ್ಟು ಉಳಿದಡೆ ಗಮನಹರಿಯದಂತೆ ಶಿಲ್ಪರಚಿಸಬೇಕಾದ ಸ್ಥಿತಿಯಲ್ಲಿರುವುದರಿಂದ (ಅಲಕಂರಣಗಳು ಹೆಚ್ಚಾದಷ್ಟು ಗಮನವು ಮುಖ್ಯ ವಸ್ತುವನ್ನು ಬಿಟ್ಟು ಎಲ್ಲೆಡೆ ಹರಿಯುವುದರಿಂದ) ಶಿಲ್ಪಿಯು ಕೇವಲ 'ಲಜ್ಜಾಗೌರಿ'ಯ ವಸ್ತುವನ್ನಳಿದು ಬೇರೆನೊ ಕೆತ್ತಿಲ್ಲದೇ ಚೌಕಟ್ಟಿಗೆ ಸೀಮಿತವಾಗಿ ಕೃತಿ ರಚಿಸಬೇಕಾಗಿರುವುದರಿಂದ ಮಿತವಾದ ಆಭರಣಗಳು ಮತ್ತು ಅಂಗವಿನ್ಯಾಸಕಷ್ಟೆ ಗಮನ ನೀಡಿರುವುದು. ಎಲ್ಲಾ ಲಜ್ಜಾಗೌರಿ ಶಿಲ್ಪಗಳಲ್ಲಿ ಕಂಡು ಬರುತ್ತದೆ.

ಅಧ್ಯಾಯ : ಏಳು

## ಸಮಾರೋಪ

ನಮ್ಮ ನಾಡಿನ ಯಾವುದೇ ಶಿಲ್ಪಗಳ ಮೂಲ ನೆಲೆ ಜನಪದ ಶಿಲ್ಪಗಳೇ ಆಗಿವೆ. ನಂತರ ಅವು ಶಿಷ್ಟ ಪದಕ್ಕೆ ಬೆಳವಣಿಗೆ ಆಗಿವೆ. ಈ ಆಶಯದ ಹಿನ್ನೆಲೆಯಲ್ಲಿ ಲಜ್ಜಾಗೌರಿ ಶಿಲ್ಪಗಳ ಕುರಿತು ಈ ಕಿರು ಸಂಶೋಧನಾ ಪ್ರಬಂಧವು ರೂಪಗೊಂಡಿದೆ. ಲಜ್ಜಾಗೌರಿ ಶಿಲ್ಪಗಳ ವೈವಿಧ್ಯತೆಯ ಹಿನ್ನೆಲೆಯಲ್ಲಿ ಇಲ್ಲಿ ಏಳು ಅಧ್ಯಾಯಗಳಲ್ಲಿ ವಿಷಯದ ನಿರೂಪಣೆ ಮತ್ತು ವಿಶ್ಲೇಷಣೆ ಮಾಡಲಾಗಿದ್ದು ಅವುಗಳ ಫಲಿತಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಸಮೀಕ್ಷಿಸಲಾಗಿದೆ.

**ಮೊದಲನೆಯ** ಅಧ್ಯಾಯದಲ್ಲಿ ಲಜ್ಜಾಗೌರಿ ಶಿಲ್ಪಗಳ ಕುರಿತು ಇಲ್ಲಿಯವರೆಗೂ ನಡೆದ ಅಧ್ಯಯನದ ಸಮೀಕ್ಷೆಯನ್ನು ಮತ್ತು ಇದುವರೆಗೂ ಬಂದ ಗ್ರಂಥ ಬಿಡಿ ಲೇಖನ, ದಿನಪತ್ರಿಕೆ ಮುಂತಾದವುಗಳ ಅವಲೋಕನ ಮಾಡಲಾಗಿದೆ. ಅಲ್ಲದೆ ಅಧ್ಯಯನಕ್ಕೆ ಒಳಪಡಿಸಿಕೊಂಡ ಸಂಶೋಧನ ವಿಧಾನದ ಕುರಿತು ಚರ್ಚಿಸಿದೆ. ಅಧ್ಯಯನದ ಹಿನ್ನಲೆ ಉದ್ದೇಶಗಳು ಮತ್ತು ಅದರ ವ್ಯಾಪ್ತಿ ಸ್ವರೂಪಗಳು ಅಲ್ಲದೆ ಈ ಅಧ್ಯಾಯದಲ್ಲಿ ಲಜ್ಜಾಗೌರಿ ಶಿಲ್ಪಗಳ ಕುರಿತಿ ಇಲ್ಲಿಯ ವರೆಗೂ ನಡೆದ ಅಧ್ಯಯನವನ್ನು ಸಮೀಕ್ಷೆ ಮಾಡಲಾಗಿದೆ.

**ಎರಡನೆಯ** ಅಧ್ಯಾಯದಲ್ಲಿ ಮಾತೃದೇವತಾ ಆರಾಧನೆ ಮತ್ತು ಲಜ್ಜಾಗೌರಿ ಶಿಲ್ಪಗಳ ಬೆಳವಣಿಗೆಯ ಐತಿಹಾಸಿಕ ಹಿನ್ನಲೆನ್ನು ಕಟ್ಟಿಕೊಡಲಾಗಿದೆ. ಭಾರತೀಯ ಮತ್ತು ಪಾಶ್ಚಾತ್ಯ ದೇಶಗಳಲ್ಲಿ ಮಾತೃದೇವತೆಯ ಶಿಲ್ಪಗಳ ಆಚರಣೆ ಸಂಪ್ರದಾಯ ಐತಿಹಾಸಿಕ ಹಿನ್ನಲೆಯನ್ನೊಳಗೊಂಡಿದೆ. ಭಾರತೀಯ ನಂಬಿಕೆಯಲ್ಲಿ ಮಾತೃದೇವತೆ ಆರಾಧನೆ ಸ್ಥೂಲ ನೋಟವನ್ನು ನೀಡಲಾಗಿದೆ. ಈ ಹಿನ್ನಲೆಯಲ್ಲಿಯೇ ಕರ್ನಾಟಕದಲ್ಲಿ ರಚನೆಯಾದ ಲಜ್ಜಾಗೌರಿ ಶಿಲ್ಪಗಳನ್ನು ಗಮನಿಸಲಾಗಿದೆ. ಲಜ್ಜಾಗೌರಿ ಶಿಲ್ಪಗಳ ಪೂಜೆಯ ಹಿನ್ನಲೆಯಲ್ಲಿ ಕಂಡುಬರುವುದು ಯೋನಿ, ಸ್ಥನಗಳೆ ಪ್ರಧಾನವಾಗಿವೆ.

**ಮೂರನೆಯ** ಅಧ್ಯಾಯವು ಕರ್ನಾಟಕದ ಲಜ್ಜಾಗೌರಿ ಶಿಲ್ಪಗಳ ಪ್ರಮುಖ ನೆಲೆಗಳು ಮತ್ತು ಶಿಲ್ಪಗಳ ಸ್ವರೂಪ, ಕರ್ನಾಟಕದಲ್ಲಿ ಸಿಗುವಂತಹ ಲಜ್ಜಾಗೌರಿ ಶಿಲ್ಪಗಳ ಬಗ್ಗೆ ಅಧ್ಯಯನ ಮಾಡಲಾಗಿದೆ. ಲಜ್ಜಾಗೌರಿ ಶಿಲ್ಪಗಳು ನಗ್ನವಾಗಿದ್ದು ಅಂಗಾತವಾಗಿ ಮಲಗಿದ್ದು ಅಥವಾ ಕಾಲುಗಳೇರಡನ್ನು ಮಡಚಿಕೊಂಡಂತೆ ಅಥವಾ ಮೇಲಕ್ಕೆಳೆದುಕೊಂಡಂತೆ ಎರಡು ತೊಡೆಗಳನ್ನು ಅಗಲಕ್ಕೆ ಚಾಚಿ ಮಲಗಿ ಕೊಂಡಂತಿರುತ್ತವೆ. ಇನ್ನು ಕೆಲವು ಸಲ ಮೊಳಕಾಲು ಮಡಚಿ ಕುಳಿತುಕೊಂಡ ಭಂಗಿಯಲ್ಲಿರುವುದು. ಕೈಗಳೆರಡನ್ನು ಮೇಲಕ್ಕೆ ಚಾಚಿ ಎರಡು ಕೈಗಳಲ್ಲಿ ಕಮಲದ ಹೂವನ್ನು ಹಿಡಿದುಕೊಂಡಿರುತ್ತದೆ. ತಲೆಯ ಭಾಗದಲ್ಲಿ ಅರಳಿದ ಕಮಲದ ಹೂವು ಸಾಮಾನ್ಯವಾಗಿ ಎಲ್ಲ ಲಜ್ಜಾಗೌರಿ ಶಿಲ್ಪಗಳಲ್ಲಿ ಇರುತ್ತದೆ. ಕೆಲವು ಶಿಲ್ಪಗಳಲ್ಲಿ ಪ್ರಾದೇಶಿಕ ವ್ಯತ್ಯಾಸಗಳಿರುತ್ತವೆ. ಮೂಲ ಆಶಯ ಮಾತ್ರ ಒಂದೇ ಆಗಿದೆ. ಕರ್ನಾಟಕದಲ್ಲಿ ಸಿಗುವ ಎಲ್ಲ ಲಜ್ಜಾಗೌರಿ ಶಿಲ್ಪಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ನಾಲ್ಕನೆಯ** ಅಧ್ಯಾಯದಲ್ಲಿ ಲಜ್ಜಾಗೌರಿ ಶಿಲ್ಪಗಳ ತಾಂತ್ರಿಕ ಆಚರಣೆ ಬಗ್ಗೆ ಹೇಳಲಾಗಿದೆ. ಈ ಆಚರಣೆಗಳು ರಹಸ್ಯವಾಗಿ ನಡೆಯುತ್ತಿದ್ದವು. ಮತ್ತು ಇಲ್ಲಿ ಹೆಣ್ಣಿನ ಪಾತ್ರ ಬಹುಮುಖ್ಯ ವಾಗಿರುತ್ತಿತ್ತು. ಕರ್ನಾಟಕದ ಉತ್ತರ ಭಾಗದಲ್ಲಿ ಕೌಳರು, ಕಾಳಮುಖರು, ನಾಥಪಂಥ ಇನ್ನೂ ಹಲವಾರು ಪಂಥದ ಸಾದಕರ ಕುರಿತು ಮತ್ತು ಲಜ್ಜಾಗೌರಿ ಶಿಲ್ಪ ಈ ಸಾಧಕರ ತಾಂತ್ರಿಕ ಆಚರಣೆಯ ಒಂದು ಭಾಗವಾಗಿ ಹೇಗೆ ಆಚರಣೆಯಲ್ಲಿತ್ತು ಎಂಬುದನ್ನು ಇಲ್ಲಿ ವಿವೇಚಿಸಲಾಗಿದೆ.

**ಐದನೆಯ** ಅಧ್ಯಾಯದಲ್ಲಿ ಲಜ್ಜಾಗೌರಿ ಮತ್ತು ಲೈಂಗಿಕತೆ ಬಗ್ಗೆ ವಿವರಿಸಲಾಗಿದೆ. ಭಾರತದಲ್ಲಿ ನಗ್ನಶಿಲ್ಪಗಳು ಬಹು ಸಾಮಾನ್ಯವಾಗಿದ್ದು ಎಲ್ಲಾ ದೇವ ದೇವತೆಗಳು ಕೂಡಾ ಹೆಚ್ಚಾಗಿ ನಗ್ನ ಅಥವಾ ಅರೇ ನಗ್ನವಾಗಿ ಉಡುಪು ಧರಿಸಿದ್ದು ಕಾಣುತ್ತೇವೆ. ಯಕ್ಷ ಯಕ್ಷಿಣೆಯರನ್ನು ದೇವತಾ

ಯೋನಿಯಲ್ಲಿ ಸೇರಿದವು ಎಂದು ಭಾವಿಸಲಾಗಿತ್ತು. ಮಾತೃದೇವತೆಯ ಮುಂದುವರೆದ ಭಾಗವಾಗಿ ಗುರುತಿಸಲ್ಪಟ್ಟರು ಭಾರತದಲ್ಲಿ ವೇದಕಾಲದ ನಂತರ ಶಿವ ಮತ್ತು ಶಕ್ತಿಯರ ಆರಾಧನೆ ಹೆಚ್ಚಿನ ಮಟ್ಟದಲ್ಲಿ ಬೆಳವಣಿಗೆ ಕಂಡು ಬಂದಿದ್ದು ಶಿವ ಮತ್ತು ಶಕ್ತಿಯರ ಪ್ರಾತಿನಿಧಿಕ ರೂಪವೇ ಲಿಂಗ ಮತ್ತು ಯೋನಿಗಳು ಲಜ್ಜಾಗೌರಿ ಶಿಲ್ಪಗಳು ಯೋನಿ ಮತ್ತು ಸ್ಥನಗಳಿಗೆ ಮಹತ್ವಕೊಟ್ಟು ರಚಿಸಲಾದ ಶಿಲ್ಪಗಳು ಲೈಂಗಿಕತೆಯುನ್ನು ವ್ಯಕ್ತಪಡಿಸುವ ಶಿಲ್ಪಗಳಾಗಿವೆ. ಲಜ್ಜಾಗೌರಿ ಶಿಲ್ಪಗಳನ್ನು ಲೈಂಗಿಕ ದೃಷ್ಠಿಕೋನದ ಹಿನ್ನೆಲೆಯಲ್ಲಿ ನಾವುನೋಡಿದಾಗ ಬೆತ್ತಲೆ ಭೈರವ ಶಿಲ್ಪಗಳು ಅಪರೂಪವೆನಿಸುವುದಿಲ್ಲ ಇಲ್ಲಿ ಲಜ್ಜಾಗೌರಿ ಶಿಲ್ಪ ಮತ್ತು ಲೈಂಗಿಕತೆಯ ಕುರಿತು ವಿವಿಧ ರೀತಿಯ ಉದಾಹರಣೆಗಳಿಂದ ಚರ್ಚಿಸಲಾಗಿದೆ.

**ಆರನೆಯ** ಅಧ್ಯಾಯದಲ್ಲಿ ಲಜ್ಜಾಗೌರಿ ಶಿಲ್ಪಗಳ ಕಲಾತ್ಮಕತೆ, ಶೈಲಿ ವಿನ್ಯಾಸ ಕುರಿತಾಗಿ ಅಧ್ಯಯನ ಮಾಡಿದೆ. ಗುಲಬರ್ಗಾ ಜಿಲ್ಲೆಯ ಸನ್ನತಿಯಲ್ಲಿ ಸಣ್ಣಗಾತ್ರದ ಶಿಲ್ಪ ಮಹತ್ವ ಪಡೆದಿದೆ, ಅವುಗಳ ವೈಶಿಷ್ಟ್ಯ ಕುರಿತು ಹೇಳಿದೆ. ಆಂದ್ರ ಪ್ರದೇಶದ ನಾಗಾರ್ಜುನ ಕೊಂಡದಲ್ಲಿ ದೊರೆತ ಪ್ರಾಚೀನ ಶಿಲಾ ಶಿಲ್ಪವು ಕೂಡಾ ವಿಶಿಷ್ಟವಾಗಿದ್ದು ಕಾಲಲ್ಲಿ ದಪ್ಪವಾದ ಗೆಜ್ಜೆಗಳನ್ನು ಹೊಂದಿದ್ದು ಯೋನಿ ಕಿಬ್ಬೊಟ್ಟೆ ಹಾಗೂ ದೇಹ ಭಾಗವು ಒಂದೇ ಆಗಿದ್ದು ಅಂಡಾಕಾರದಲ್ಲಿದ್ದು ಹೊಕ್ಕಳಿನಿಂದ ಕೆಳಭಾಗವು ವಿಶಿಷ್ಟರೀತಿಯ ಅಲಂಕಾರವನ್ನು ಹೊಂದಿದೆ. ಬಾಗಲಕೋಟ ವಸ್ತು ಸಂಗ್ರಹಾಲಯದ ಲಜ್ಜಾಗೌರಿ ಶಿಲ್ಪಗಳ ಕಲಾತ್ಮಕತೆ ಶೈಲಿ ವಿನ್ಯಾಸದ ಬಗ್ಗೆ ಹೀಗೆ ಅನೇಕ ಲಜ್ಜಾಗೌರಿ ಶಿಲ್ಪಗಳನ್ನು ಇಲ್ಲಿ ದೃಶ್ಯಕಲೆಯ ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಏಳನೆಯ** ಅಧ್ಯಾಯವು ಸಮಾರೋಪವಾಗಿದ್ದು ಆರು ಅಧ್ಯಯಗಳಲ್ಲಿ ಹೊರ ಹೊಮ್ಮುವ ಪ್ರಮುಖ ಫಲಿತಗಳು ಇಲ್ಲಿ ಬಿಂಬಿತಗೊಂಡಿವೆ.

ದೃಶ್ಯಕಲಾ ಕ್ಷೇತ್ರದಲ್ಲಿ ಅನುಭವ ಹೊಂದಿದ ಕಲಾವಿಧರು ಕಲಾ ಸಂಶೋಧನಾಸಕ್ತರು ಈ ಬಗೆಯ ಅಧ್ಯಯನ ಕೈಗೊಳ್ಳಲು ಗ್ರಾಮೀಣ ಪ್ರದೇಶದಲ್ಲಿ ಸಾಕಷ್ಟು ಇಂತಹ ವಿಷಯಗಳು ಅಡಗಿವೆ. ಅವು ದೃಶ್ಯ ಪ್ರಪಂಚದಿಂದ ಮಾಯವಾಗದಂತೆ ಅವುಗಳ ಸಂಗ್ರಹದ ಅಧ್ಯಯನದ ಕಾರ್ಯವು ಆಗಬೇಕಾಗಿದೆ. ಈ ಹಿನ್ನೆಲೆಯಲ್ಲಿ ಲಜ್ಜಾಗೌರಿ ಶಿಲ್ಪಗಳ ಕುರಿತು ಈ ಸಂಶೋಧನೆ ಪ್ರಾತಿನಿಧಿಕವಾದ ಮತ್ತು ಅಧ್ಯಯನದ ಪರಿಮಿತಿಯಲ್ಲಿ ಅತ್ಯಂತ ಸ್ಥೂಲವಾದ ಮಾದರಿಗಳ ಕುರಿತಾದ ಅಧ್ಯಯನವಾಗಿದೆ. ಇನ್ನೂ ಈ ಲಜ್ಜಾಗೌರಿ ಶಿಲ್ಪವನ್ನು ವ್ಯಾಪಕವಾಗಿ ಅಧ್ಯಯನ ಮಾಡಲು ಅವಕಾಶಗಳಿವೆ. ಈ ಕಿರು ಪ್ರಬಂಧ ಈ ದಿಸೆಯಲ್ಲಿ ಸಣ್ಣ ಪ್ರಯತ್ನವಾಗಿದೆ.

## ಮುಖ್ಯವಾಗಿ ಕಂಡುಬಂದ ಅಧ್ಯಯನದ ಫಲಿತಗಳು

೧. ಅತ್ಯಂತ ಪ್ರಾಚೀನವಾದ ಲಜ್ಜಾಗೌರಿ ಶಿಲ್ಪವು ಕರ್ನಾಟಕದ ಸನ್ನತಿಯಲ್ಲಿ ಮಣ್ಣಿನ ಟೆರಾಕೂಟ ಶಿಲ್ಪವಾಗಿದೆ. ಇದರ ಕಾಲ ಸುಮಾರು ೨ರಿಂದ ೩ನೆಯ ಶತಮಾನದೆಂದು ವಿದ್ವಾಂಸರು ಗುರುತಿಸಿದ್ದಾರೆ. ಮತ್ತು ಅತಿ ಚಿಕ್ಕ ಗಾತ್ರದ ಲಜ್ಜಾಗೌರಿ ಶಿಲ್ಪವೆಂದು ಪ್ರಸ್ತುತ ಅಧ್ಯಯನ ಗುರುತಿಸಿದೆ.

೨. ಲಜ್ಜಾಗೌರಿ ಶಿಲ್ಪವು ಒಟ್ಟಾರೆ ರಚಿತವಾಗಿರುವ ಕಾಲ ೫-೬ನೇ ಶತಮಾನವೆಂದು ಹೇಳ ಬಹುದು.

೩. ಹುಲಿಗೆಮ್ಮನಕೊಳ್ಳದಲ್ಲಿರುವ ಲಜ್ಜಾಗೌರಿ ಶಿಲ್ಪಗಳ ಕಾಲ ೬-೭ನೇ ಶತಮಾನದೆಂದು ವಿದ್ವಾಂಸರು ಗುರುತಿಸಿದ್ದಾರೆ.

೪. ಬಾಗಲಕೋಟ ಜಾನಪದ ವಸ್ತುಸಂಗ್ರಹಾಲಯದಲ್ಲಿ ಹೊಸದಾಗಿ ಲಜ್ಜಾಗೌರಿ ಶಿಲ್ಪವೊಂದನ್ನು ಸಂಗ್ರಹಿಸಿದ್ದು ಅದರ ಕಾಲ ಸುಮಾರು ೧೦ ರಿಂದ ೧೧ನೇ ಶತಮಾನದ್ದಾಗಿದೆ. ಇದು ಇಲ್ಲಿಯವರೆಗೆ ಬೆಳಕಿಗೆ ಬಂದಿರಲಿಲ್ಲ.

೫. ಲಜ್ಜಾಗೌರಿ ಶಿಲ್ಪಗಳು ಕಿರು ರೂಪಶಿಲ್ಪಗಳಲ್ಲಿ ಮತ್ತು ದೊಡ್ಡಗಾತ್ರದಲ್ಲಿ ರಚನೆಗೊಂಡಿವೆ. ಸನ್ನತಿಯಲ್ಲಿ ಅತಿ ಚಿಕ್ಕ ಗಾತ್ರದ ಲಜ್ಜಾಗೌರಿ ಶಿಲ್ಪವಿದ್ದರೆ, ಐಹೊಳೆಯ ವಸ್ತುಸಂಗ್ರಹಾಲಯದಲ್ಲಿ ಮತ್ತು ಮಹಾಕೂಟ ಹಾಗೂ ಬಾದಾಮಿ ವಸ್ತು ಸಂಗ್ರಹಾಲಯದಲ್ಲಿ ದೊಡ್ಡ ಗಾತ್ರದ ಲಜ್ಜಾಗೌರಿ ಶಿಲ್ಪಗಳು ಕಂಡು ಬರುತ್ತವೆ.

೬. ಒಟ್ಟಾರೆ ಲಜ್ಜಾಗೌರಿ ಶಿಲ್ಪಗಳು ತಾಂತ್ರಿಕ ಆಚರಣೆಯ ಸಂಪ್ರದಾಯದಲ್ಲಿಯೇ ರಚನೆಗೊಂಡಿರುವುದು ಸ್ಪಷ್ಟವಾಗುತ್ತದೆ. ಈಗಲೂ ಸಿದ್ದನಕೊಳ್ಳದಲ್ಲಿ ಈ ಆಚರಣೆ ಜೀವಂತವಾಗಿದೆ.

೭. ಲಜ್ಜಾಗೌರಿ ಶಿಲ್ಪಗಳು ಉತ್ತರ ಕರ್ನಾಟಕದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಂಡು ಬಂದಿವೆ (ಬಾಗಲಕೋಟ ಜಿಲ್ಲೆ)

೮. ಲಜ್ಜಾಗೌರಿ ಶಿಲ್ಪಗಳಲ್ಲಿ ಶಿಲ್ಪದ ಮುಖ ಅಥವಾ ಶಿರೋಭಾಗ ಇಲ್ಲಂದಂತೆ ರಚನೆಯಾಗಿರುವುದು ಗಮನಾರ್ಹ ಅಂಶವಾಗಿದೆ. ಮುಖದ ಸ್ಥಳದಲ್ಲಿ ಕಮಲದ ಹೂವನ್ನು ಕೆತ್ತಿರುತ್ತಾರೆ. ಈ ಶಿಲ್ಪಗಳು ಸಂಪೂರ್ಣವಾಗಿ ನಗ್ನವಾಗಿರುತ್ತವೆ.

೯. ಲಜ್ಜಾಗೌರಿ ಶಿಲ್ಪಗಳು ನದಿ, ಕೊಳ್ಳ, ಗುಹೆ ಮುಂತಾದ ನಿರ್ಜನ ಪ್ರದೇಶಗಳಲ್ಲಿ ಈ ಶಿಲ್ಪಗಳು ಕಂಡು ಬರುತ್ತವೆ.

೧೦. ಲಜ್ಜಾಗೌರಿ ಶಿಲ್ಪಗಳ ಸ್ಥನ ಮತ್ತು ಯೋನಿಯನ್ನು ಎದ್ದು ಕಾಣುವ ಹಾಗೆ ಶಿಲ್ಪ ರಚನೆಯಾಗಿರುವುದು ಕಂಡು ಬರುತ್ತವೆ.

೧೧. ಬಾಗಲಕೋಟ ಜಾನಪದ ವಸ್ತುಸಂಗ್ರಹಾಲಯದಲ್ಲಿರುವ ಲಜ್ಜಾಗೌರಿ ಶಿಲ್ಪವು ವಿಭಿನ್ನವಾಗಿದ್ದು ಇಲ್ಲಿ ಯೋನಿಯನ್ನು ತನ್ನ ಎರಡು ಕೈಗಳಿಂದ ಅಗಲಿಸಿದ ರೀತಿಯಲ್ಲಿದೆ. ಸಾಮಾನ್ಯವಾಗಿ ಲಜ್ಜಾಗೌರಿ ಶಿಲ್ಪಗಳ ಕೈಯಲ್ಲಿ ಕಮಲದ ಹೂವುಗಳಿರುತ್ತವೆ. ಒಟ್ಟಾರೆ ಉದ್ದೇಶ ಇಲ್ಲಿ ಒಂದೆ ಆಗಿದೆ.

೧೨. ಬಾದಾಮಿ ಮತ್ತು ಬಾಗಲಕೋಟದಲ್ಲಿರುವ ಲಜ್ಜಾಗೌರಿ ಶಿಲ್ಪವು ಒಳ್ಳೆಯ ರೀತಿಯಲ್ಲಿ ಸಂರಕ್ಷಿಸಲ್ಪಟ್ಟಿವೆ. ಉಳಿದೆಲ್ಲವು ಭಗ್ನವಾಗಿವೆ.

೧೩. ಬೀಳಗಿ ಮತ್ತು ಹುಲಿಗೆಮ್ಮನಕೊಳ್ಳದ ಶಿಲ್ಪಗಳು ಜಾನಪದ ಶೈಲಿಯಲ್ಲಿವೆ, ಉಳಿದೆಲ್ಲವು ಶಿಷ್ಟಪದ ರೂಪದಲ್ಲಿವೆ.

೧೪. ತಾಂತ್ರಿಕ ಪಂಥದ ಹಿನ್ನಲೆಯಲ್ಲಿ ಲಜ್ಜಾಗೌರಿ ಶಿಲ್ಪಗಳು ಪ್ರಮುಖವಾಗಿ ಬೆಳವಣಿಗೆಯಾಗಿರುವಂತೆ ಕಂಡುಬರುತ್ತವೆ.

೧೫. ಬಳ್ಳಿಗಾವಿಯ ಶಿಲ್ಪಕ್ಕೆ ಕಮಲಮ್ಮ ಎಂದು ಕರೆಯುತ್ತಾರೆ. ಇಲ್ಲಿ ಮುಖದ ಭಾಗದಲ್ಲಿ ಕಮಲದ ಹೂವು ಕೆತ್ತಿರುವುದರಿಂದ ಮತ್ತು ಎರಡು ಕೈಗಳಲ್ಲಿ ಕಮಲದ ಹೂವು ಹಿಡಿದಿರುವುದರಿಂದ ಸಹಜವಾಗಿ ಈ ಹೆಸರು ಬಂದಿರ ಬಹುದಾಗಿದೆ.

# ಗ್ರಂಥ ಋಣ


೦೧. ವಾರ್ಗ ಭಾಗ-೨ — ಡಾ.ಎಂ.ಎಂ.ಕಲಬುರ್ಗಿ
ನರೇಶ್ ಮತ್ತು ಬೆಂಗಳೂರು ಕಂಪನಿ. ೧೯೮೮

೦೨. ಲಜ್ಜಾಗೌರಿ — ಮರಾಠಿ ಮೂಲ : ಡಾ.ರಾಮಚಂದ್ರ. ಚಿಂತಾಮಣಿ. ಢೇರೆ ಕನ್ನಡಕ್ಕೆ ಅನು: ಡಾ.ವಿಠ್ಠಲರಾವ್ ಗಾಯಕ್ವಾಡ.
ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೩

೦೩. ಕರ್ನಾಟಕ ಜನಪದ ಶಿಲ್ಪಕಲೆ — ಡಾ.ಶಿವಾನಂದ ಬಂಟನೂರ.
ಅ.ಪ್ರ.ಪಿಹೆಚ್.ಡಿ. ಮ.ಪ್ರ.ಕ.ವಿ. ಹಂಪಿ. ೨೦೦೨

೦೪. ಬಾದಾಮಿ ಸಾಂಸ್ಕೃತಿಕ ಅಧ್ಯಯನ — ಡಾ.ಶಿಲಾಕಾಂತ ಪತ್ತಾರ.
ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೦

೦೫. ಶ್ರೀ ಕ್ಷೇತ್ರ ಮಹಾಕೂಟ.ಶ್ರೀ ಸಂಗಮೇಶ ಆಫಸೆಟ್ ಪ್ರಿಂಟ್ಸ್, ಗುಳೇದಗುಡ್ಡ. ೧೯೮೪ — ಶ್ರೀ ಶಂಕರಯ್ಯ ಶಾಸ್ತ್ರೀಗಳು ಬ. ಹೊಸಗೌಡರ.

೦೬. ವಿಜಯನಗರದ ಗಾರೆ ಶಿಲ್ಪ — ಡಾ. ಸಿ. ಮಹದೇವ
ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೦

೦೭. ಇತಿಹಾಸ ದರ್ಶನ ಸಂ. ೧೧ — (ಸಂ) ಡಾ.ಸೂರ್ಯನಾಥ ಕಾಮತ್
ಕರ್ನಾಟಕ ಇತಿಹಾಸ ಅಕಾಡೆಮಿ, (ರಿ) ಬೆಂಗಳೂರು. ೧೯೯೬

೦೮. ಮಾತೃ ಪ್ರಧಾನ ಪರಿಕಲ್ಪನೆ, ಮಂಟಪ ಮಾಲೆ.೧೨೩ — ಡಾ. ಶೈಲಜಾ ಹಿರೇಮಠ
ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೪

೦೯. ದೇವರನ್ನು ಕುರಿತು ಒಂದು ಬಹುಮುಖಿ ನೋಟ — (ಸಂ)ಪ್ರೊ.ಬಿ.ವಿ.ವೀರಭದ್ರಪ್ಪ
ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೫

೧೦. ಶಿಕಾರಿಪುರದ ಸಿರಿ — ವಿನಾಯಕ ಎಂ. ಶೆಟ್ಟಿ.
ಮಹಾಮನೆ ಪ್ರಕಾಶನ ನವೋದಯ ನಗರ ಧಾರವಾಡ-೩. ೨೦೦೬

೧೧. ದಲಿತ ಚಿಂತನೆ — ಮೊಗಳ್ಳಿ ಗಣೇಶ.
ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೨

೧೨. ದೇವಾಲಯಗಳು ಮತ್ತು ಲೈಂಗಿಕ ಶಿಲ್ಪ — ಮೂಲ:ತಾಪಿ ಧರ್ಮರಾವ್ ಅನು: ಎಸ್.ಆರ್.ಶಾಸ್ತ್ರಿ
ನವಕರ್ನಾಟಕ ಪಬ್ಲಿಕೇಶನ್ಸ್ ಪ್ರ.ಲಿಂ.ಬೆಂಗಳೂರು. ೨೦೦೪

೧೩. ಎಲ್ಲಮ್ಮ ಒಂದು ಜಾನಪದಿಯ ಅಧ್ಯಯನ ಪ್ರೊ.ಎನ್. ಚಂದ್ರಪ್ಪ
ಮುಂಡ ಪ್ರಕಾಶನ, ಬೆಂಗಳೂರು-೬೬. ೨೦೦೨

೧೪. ಶಂಭಾ.ಜೋಶಿ ಅಭಿನಂದನ ಗ್ರಂಥ ಅಧ್ಯಯನ (ಸಂ)ಡಾ.ಎಂ.ಚಿದಾನಂದಮೂರ್ತಿ
ಕರ್ನಾಟಕ ಸರಕಾರ ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಕನ್ನಡ ಭವನ ಬೆಂಗಳೂರು. ೧೯೮೦

೧೫. ಹಂಪಿಯ ಸ್ಮಾರಕಗಳಲ್ಲಿ ಜಾನಪದೀಯ ಅಂಶಗಳು ಚೆಲುವರಾಜು
ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೦

೧೬. ಮಹಿಳೆ ಒಂದು ಅಧ್ಯಯನ ಡಾ.ಜ್ಯೋತ್ಸ್ನಾಕಾಮತ್
ನವಕರ್ನಾಟಕ ಪಬ್ಲಿಕೇಶನ್ಸ್ ಪ್ರೈ.ಲಿಂ. ೧೯೯೯

೧೭. ಚಿದಾನಂದ ಸಮಗ್ರ ಸಂಪುಟ III ಡಾ.ಎಂ. ಚಿದಾನಂದಮೂರ್ತಿ
ಜನ-ಜನಪದ-ಜಾನಪದ ಸಪ್ನಾ ಬುಕ್ ಹೌಸ್ ೨೦೦೨

೧೮. ಕನ್ನಡ ಜಾನಪದ ವಿಶ್ವಕೋಶ ಸಂಪುಟ.II ಡಾ.ಚಂದ್ರಶೇಖರ ಕಂಬಾರ.
ಕನ್ನಡ ಸಾಹಿತ್ಯ ಪರಿಷತ್ತು ಚಾಮರಾಜ ಪೇಟೆ
ಬೆಂಗಳೂರು. ೧೯೮೫

೧೯. ಚಿತ್ರ-ಚಿತ್ತ ಚಿ. ಸು. ಕೃಷ್ಣಶೆಟ್ಟಿ
ಇಳಾ ಪ್ರಿಂಟರ್ಸ್ ಬೆಂಗಳೂರು. ೨೦೦೦

೨೦. ಜಾನಪದ ಸಾಹಿತ್ಯ ದರ್ಶನ ಭಾಗ-೮ (ಸಂ)ಡಾ. ಎಂ. ಬಿ. ಕೊಟ್ರಶೆಟ್ಟಿ
ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ. ೧೯೯೦

೨೧. ಕಾಪಾಲಿಕರು ಮತ್ತು ಕಾಳಾಮುಖರು ವಿರುಪಾಕ್ಷ ಕುಲಕರ್ಣಿ
ಕಣ್ಮರೆಯಾದ ಎರಡು ಶೈವ ಸಂಪ್ರದಾಯಗಳು.
ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ ಬೆಂಗಳೂರು-೨. ೨೦೦೫

೨೨. ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ ಭಾಗ-೨ ಎಸ್.ಎಸ್.ಹಿರೇಮಠ
ಜಾತ್ರೆಗಳು ಸಮತಾ ಪ್ರಕಾಶನ ಹೊಸಪೇಟೆ. ೧೯೯೩

೨೩. ಇತಿಹಾಸ ದರ್ಶನ ಭಾಗ-೩ (ಸಂ)ಲಕ್ಷ್ಮಣ ತೆಲಗಾವಿ
ಕರ್ನಾಟಕ ಇತಿಹಾಸ ಅಕಾಡೆಮಿ, (ರಿ) ಬೆಂಗಳೂರು. ೧೯೮೮

೨೪. ಶಿಲ್ಪಶ್ರೀ ಕರ್ನಾಟಕ ಶಿಲ್ಪೋತ್ಸವ ಸ್ಮರಣ ಸಂಚಿಕೆ(ಸಂ) ಎನ್. ಮರಿಶಾಮಾಚಾರ
ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಕನ್ನಡ ಭವನ ಬೆಂಗಳೂರು.

೨೫. ಮಾತೃಪೂಜೆ ಮಂಟಪ ಮಾಲೆ-೧೬ ಚಿ.ನಾ.ಮಂಗಳಾ
ಕನ್ನಡ ವಿಶ್ವವಿದ್ಯಾಲಯ, ಹಂಪಿ. ೧೯೯೪

೨೬. ತಂತ್ರಯೋನಿ, ಸತ್ಯ ಕಾಮ
ಮನೋಹರ ಗ್ರಂಥಮಾಲೆ ಧಾರವಾಡ ೨೦೦೩

೨೭. ಸೌಂದರ್ಯ ಲಹರೀ, (ಸಂ)ವಿ.ಸು.ನಾರಾಯಣಸ್ವಾಮಿ ಶಾಸ್ತ್ರೀ
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ,
ಮೈಸೂರು ವಿಶ್ವವಿದ್ಯಾಲಯ. ಮೈಸೂರು. ೨೦೦೩

೨೮. ಶಿಲ್ಪಕಲಾ ಪ್ರಪಂಚ ಪಿ.ಆರ್.ತಿಪ್ಪೇಸ್ವಾಮಿ.
ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು. ೧೯೯೪

೨೯. ಕಲಾವಾರ್ತೆ-೬೫ (ತ್ರೈಮಾಸಿಕ ಪತ್ರಿಕೆ) (ಸಂ)ಡಾ. ಅ.ಲ.ನರಸಿಂಹನ್
ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು. ೨೦೦೨

೩೦. ಮಾತೃದೇವತಾ ಆರಾಧನೆ. ಅ.ಪ್ರ.ಎಂ.ಫಿಲ್.ಕಿ.ಪ್ರ. ಕಲವೀರ ಮನ್ವಾಚಾರ್
ಕನ್ನಡ ವಿಶ್ವವಿದ್ಯಾಲಯ, ಹಂಪಿ. ೧೯೯೫

# ಲಜ್ಜಾಗೌರಿ ಶಿಲ್ಪಗಳಿರುವ ನೆಲೆಗಳು



## ಕರ್ನಾಟಕದಲ್ಲಿರುವ ಲಜ್ಜಾಗೌರಿ ಶಿಲ್ಪಗಳ ನೆಲೆಗಳು

೧. ಗುಲಬರ್ಗಾ ಜಿಲ್ಲೆ, ಶಹಾಪೂರ ತಾಲೂಕು, ಸನ್ನತಿ.

೨. ಬಾಗಲಕೋಟ ಜಿಲ್ಲೆ, ಬಾಗಲಕೋಟ ನವನಗರ.

೩. ಬಾಗಲಕೋಟ ಜಿಲ್ಲೆ, ಬೀಳಗಿ ತಾಲೂಕು, ಬೀಳಗಿ.

೪. ಬಾಗಲಕೋಟ ಜಿಲ್ಲೆ, ಬಾದಾಮಿ ತಾಲೂಕು, ಬಾದಾಮಿ.

೫. ಬಾಗಲಕೋಟ ಜಿಲ್ಲೆ, ಬಾದಾಮಿ ತಾಲೂಕು, ಮಹಾಕೂಟ.

೬. ಬಾಗಲಕೋಟ ಜಿಲ್ಲೆ, ಬಾದಾಮಿ ತಾಲೂಕು, ಹುಲಿಗೆಮ್ಮನ ಕೊಳ್ಳ.

೭. ಬಾಗಲಕೋಟ ಜಿಲ್ಲೆ, ಹುನಗುಂದ ತಾಲೂಕು, ಐಹೊಳೆ.

೮. ಬಾಗಲಕೋಟ ಜಿಲ್ಲೆ, ಹುನಗುಂದ ತಾಲೂಕು, ಸಿದ್ದನಕೊಳ್ಳ.

೯. ಬೆಳಗಾವಿ ಜಿಲ್ಲೆ, ಹುಕ್ಕೇರಿ ತಾಲೂಕು, ಮಜತಿ.

೧೦. ಶಿವಮೊಗ್ಗ ಜಿಲ್ಲೆ, ಶಿಖಾರಿಪುರ ತಾಲೂಕು, ಬಳ್ಳಿಗಾವಿ.

## ಮಾಹಿತಿ ನೀಡಿದ ವಕ್ತೃಗಳು

ಡಾ. ಎಸ್.ಸಿ.ಪಾಟೀಲ.

ಡಾ. ಕಲವೀರ. ಮನ್ವಾಚಾರ್.

ಡಾ. ಮಲ್ಲಿಕಾರ್ಜುನ. ಬಾಗೋಡಿ.

ಡಾ. ಶಿವಾನಂದ. ಬಂಟನೂರ.

ಶ್ರೀ ಜೀ. ಲಕ್ಷ್ಮೀಪತಿ.

ಶ್ರೀ ಈಶ್ವರಪ್ರಕಾಶ.

ಶ್ರೀ ವಿಶ್ವನಾಥ. ಪಿ.ಎಂ.

ಶ್ರೀ ಎಂ.ಆಯ್. ಬಾರಾವಲಿ.

## ಸಂಕ್ಷೇಪಗಳು

೧. ಪ್ರ.ಸಂ.– ಪ್ರಧಾನ ಸಂಪಾದಕರು.

೨. ಕ.ಲ.ಲ.ಅ– ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು.

೩. ಕ.ವಿ.ವಿ.ಹಂಪಿ– ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ಕಿ.ಪ್ರ– ಕಿರು ಪ್ರಬಂಧ.

೫. ಪು.ಸಂ.– ಪುಟ ಸಂಖ್ಯೆ.

೬. ಪ್ರ.ಲಿಂ.– ಪ್ರವೇಟ ಲಿಮಿಟೆಡ್.

೭. ಗು.ವಿ.ವಿ.– ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೮. ಮ.ಪ್ರ– ಮಹಾ ಪ್ರಬಂಧ.

೯. ಮೈ.ವಿ.ವಿ.– ಮೈಸೂರ ವಿಶ್ವವಿದ್ಯಾಲಯ, ಮೈಸೂರು.

೧೦. ಸಂ– ಸಂಪಾದಕ.

